# ಪಂಚಪಕ್ಷಿ ಪ್ರಶ್ನೆ ಫಲಶಾಸ್ತ್ರ



ಮಹೇಶ್ ಪ್ರಕಾಶನ
ಯಶವಂತಪುರ, ಬೆಂಗಳೂರು-560022

# ಪಂಚಪಕ್ಷಿ ಪ್ರಶ್ನಶಾಸ್ತ್ರ

ಮೂಲ :
ನಾರಕಂಶೆ ಮಠಾಧ್ಯಕ್ಷ ವೇ|| ಕಂತಪ್ಪ ಶಾಸ್ತ್ರಿಗಳು

ಪರಿಷ್ಕರಿಸಿದವರು :
**ವಿದ್ವಾನ್ ಕೆ. ಚಂದ್ರಶೇಖರ್**

ಪ್ರಕಾಶಕರು :
**ಮಹೇಶ್ ಪ್ರಕಾಶನ**
1240/ಬಿ, 1ನೇ ಮುಖ್ಯರಸ್ತೆ, 3ನೇ ಪಶ್ಚಿಮ ಅಡ್ಡರಸ್ತೆ,
ಎಲ್. ಎಫ್. ಕಾಲೋನಿ, ಹನುಮಂತನಗರ, ಬೆಂಗಳೂರು-22.

'PANCHAPAKSHI PRASHNA SHASTRA' — Revised by
Sri Vidwan K. Chandrashekhar, Published by :
Mahesh Prakashana, 1240/B, 1st Main, L.N. Colony,
3rd West cross, Yeshwanthapur, Bangalore-22.



ಪ್ರಥಮ ಮುದ್ರಣ : ಅಗಸ್ಟ್ 1993

ಪ್ರತಿಗಳು : 1,000

ಬೆಲೆ : ರೂ. 15-00

ಜಗನ್ನಾಥ್ ಪ್ರಿಂಟರ್ಸ್
ಡಿ.ಎಸ್. ಲೇನ್, ಸೌರಾಷ್ಟ್ರಪೇಟೆ, ಬೆಂಗಳೂರು-53.

# ಮುನ್ನುಡಿ

ಭಗವಂತನಿಂದ ಸೃಷ್ಟಿಸಲ್ಪಟ್ಟ ಉಪವೇದಗಳಲ್ಲಿ ಒಂದಾದ ಜ್ಯೋತಿಷ್ಯ ಶಾಸ್ತ್ರದಲ್ಲಿ ಪ್ರಶ್ನಶಾಸ್ತ್ರಗಳು ಬಹಳಷ್ಟಿವೆ. ಅದರಲ್ಲಿ ಮನುಷ್ಯನು ಪ್ರತಿಯೊಂದು ಘಳಿಗೆಯಲ್ಲೂ ನಡೆಯುವ ಫಲವನ್ನು ತಿಳಿದುಕೊಳ್ಳಲು ಪಂಚಪಕ್ಷಿ ಶಾಸ್ತ್ರವನ್ನು ಪರಮೇಶ್ವರನು ಪಾರ್ವತೀ ದೇವಿಗೆ ಉಪದೇಶ ಮಾಡಿದನು. ಈ ಪಂಚಪಕ್ಷಿ ಶಾಸ್ತ್ರವನ್ನು ವಿಸ್ತಾರವಾಗಿ ರಚಿಸಿದ ಶ್ರೀಯುತ್ಸು ಶುಕ್ರಾಚಾರ್ಯರಿಗೂ, ಅಗಸ್ತ್ಯ ಮಹರ್ಷಿಗಳಿಗೂ ಹಾಗೂ ರೋಮಕ ಮಹರ್ಷಿಗಳಿಗೆ ಸಲ್ಲುತ್ತದೆ.

ಈ ಪಂಚಪಕ್ಷಿ ಶಾಸ್ತ್ರದ ಬಗ್ಗೆ ಸರ್ವರೂ ತಿಳಿದುಕೊಳ್ಳಲೆಂದು ಈ ಪುಟ್ಟ ಹೊತ್ತಿಗೆಯನ್ನು ರಚಿಸಲಾಗಿದೆ. ಈ ಕೃತಿಯನ್ನು ರಚಿಸಲು ಪ್ರೇರೇಪಿಸಿದ ಮಹೇಶ್ ಪ್ರಕಾಶನದವರಿಗೆ ಆಭಾರಿಯಾಗಿದ್ದೇನೆ.

ಸಮಯಕ್ಕೆ ಸರಿಯಾಗಿ ಮುದ್ರಣ ಮಾಡಿಕೊಟ್ಟ ಜಗನ್ನಾಥ್ ಪ್ರಿಂಟರ್ಸ್‌ನ ಮಾಲೀಕರಿಗೂ, ಅಚ್ಚುಕೂಟ ಬಳಗದವರಿಗೂ ನನ್ನ ವಂದನೆಗಳು.

೧೯೯೩ ಇತಿ

ಬೆಂಗಳೂರು —ವಿದ್ವಾನ್ ಕೆ. ಚಂದ್ರಶೇಖರ್

# ಪರಿವಿಡಿ





# ಗಿಡಗ (ಶ್ಯೇನ) ಪ್ರಶ್ನ ಶಾಸ್ತ್ರ

ಗಿಡಗಕ್ಕೆ ವಾಕ್ಯ ಪ್ರಥಮಾಕ್ಷರಗಳು :

ಅ, ಆ, ಕ, ಕಾ, ಚ, ಚಾ, ಟ, ಟಾ, ತ, ತಾ, ಪ, ಪಾ, ಮ, ಮಾ ಯ, ಯಾ, ರ, ರಾ, ವ, ವಾ.

ಜನ್ಮ ನಕ್ಷತ್ರ, ನಾಮ ನಕ್ಷತ್ರ, ನಾಮಾದ್ಯಕ್ಷರದ ಮೇಲಿರುವ ಸ್ವರದಿಂದ ಪಕ್ಷಿಗಳನ್ನು ತಿಳಿದುಕೊಳ್ಳುವ ಬಗೆ :

ಗಿಡಗಕ್ಕೆ ಶುಕ್ಲ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :

ಅಶ್ವಿನಿ, ಭರಣಿ, ಕೃತ್ತಿಕ, ರೋಹಿಣಿ, ಮೃಗಶಿರ.

ಕೃಷ್ಣ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :

ಅನುರಾಧ, ಜ್ಯೇಷ್ಠಾ, ಮೂಲಾ ಪೂರ್ವಾಷಾಢ, ಉತ್ತರಾಷಾಢ.

ಶುಕ್ಲ ಪಕ್ಷ ತಿಥಿ :

ಶುದ್ಧ ಪಾಡ್ಯಮಿ, ಶುದ್ಧ ಷಷ್ಠಿ, ಶುದ್ಧ ಏಕಾದಶಿ.

ಶುಕ್ಲ ಪಕ್ಷ ರಾಶಿ :

ಮೇಷ, ಸಿಂಹ, ವೃಶ್ಚಿಕ.

ಕೃಷ್ಣ ಪಕ್ಷ ತಿಥಿ :

ಬಹುಳ ಪಂಚಮಿ, ಬಹುಳ ದಶಮಿ, ಬಹುಳ ಅಮಾವಾಸ್ಯೆ.

ಕೃಷ್ಣ ಪಕ್ಷ ರಾಶಿ :

ವೃಷಭ, ತುಲಾ, ಮೀನಾ.

ಆರೂಢಕ್ಕೆ ಉಪಯೋಗವಾದ ಶುಕ್ಲ ಪಕ್ಷ ಗಿಡಗ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಹಸಿರು | ಬ್ರಹ್ಮ | ಅಗ್ನಿ | ಪೂರ್ವ | ಕಾಗೆ, ಕೋಳಿ | ನವಿಲು, ಗೂಬೆ |

ಆರೂಢಕ್ಕೆ ಉಪಯೋಗವಾದ ಕೃಷ್ಣ ಪಕ್ಷ ಗಿಡಗ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಕಪ್ಪು | ಬ್ರಹ್ಮ | ಪೃಥ್ವಿ | ಪೂರ್ವ | ಕೋಳಿ, ಗೂಬೆ | ಕಾಗೆ, ನವಿಲು |

ಆರೂಢಕ್ಕೆ ಉಪಯೋಗವಾದ ಶುಕ್ಲ-ಕೃಷ್ಣ ಪಕ್ಷಗಳ ಗಿಡಗ ಪಕ್ಷಿ ಚಕ್ರ

| ಅಕ್ಷರಗಳು | ಜಾತಿ | ಗ್ರಹ | ದೇವತೆ | ಆಕಾರ | ಧಾತುಮೂಲ ಜೀವ |
|---|---|---|---|---|---|
| ಅ | ಪುರುಷ | ಗುರು | ಬ್ರಹ್ಮ | ಗೋಳಾಕಾರ | ಮೂಲ |

| ಪಾದ | ರುಚಿ | ವೃಕ್ಷ | ಲೋಹ | ಕಾಲ | ಗಮನಾಗಮನ |
|---|---|---|---|---|---|
| ದ್ವಿಪಾದ | ಖಾರ | ಆಲದ ಮರ | ಬಂಗಾರ | ಭವಿಷ್ಯತ್ಕಾಲ | ನಿಂತುಕೊಂಡಿದ್ದಾನು |

ಗಿಡಗ ಪಕ್ಷಿಯ ಆಕಾರ್ದ ಚಕ್ರ




ಕಾಲ ರೀತಿ ನಿರ್ದೇಶನ :

ಒಂದು ದಿನವನ್ನು 5 ಭಾಗಗಳಾಗಿ ವಿಭಜನೆ ಮಾಡಿದರೆ ಒಂದು ಭಾಗಕ್ಕೆ 6 ಘಳಿಗೆ ದೊರಕುತ್ತದೆ. ಶುಕ್ಲಪಕ್ಷಗಳೊಂದೊಂದಕ್ಕೂ 15 ತಿಥಿಗಳು.

7 ದಿವಸಗಳಿಗೆ 1 ವಾರ

1 ದಿವಸಕ್ಕೆ—30 ಹಗಲು ಘಳಿಗೆಗಳು 30 ರಾತ್ರಿ ಘಳಿಗೆಗಳು

6 ಘಳಿಗೆ—1 ಝಾವ

ಗಿಡಗ ಪಕ್ಷಿ ಸ್ಥಿತಿ — ಶುಕ್ಲಪಕ್ಷದ ಹಗಲಿನಲ್ಲಿ

ಹರಿಸುಕೇತೋ—ಅಂದರೆ ಆದಿತ್ಯ ಮಂಗಳವಾರ ಸಂಚಾರ ಮಾಡುವುದು.

ಗಿಡಗ ಪಕ್ಷಿ ಸ್ಥಿತಿ – ಶುಕ್ಲ ಪಕ್ಷದ ರಾತ್ರಿಯಲ್ಲಿ
ಉಪೇಂದ್ರೋಹರಿಃ – ಅಂದರೆ ಶುಕ್ರವಾರ ಸಂಚಾರ ಮಾಡುವುದು.

ಗಿಡಗ ಪಕ್ಷಿ ಸ್ಥಿತಿ – ಕೃಷ್ಣ ಪಕ್ಷದ ಹಗಲಿನಲ್ಲಿ
ದೇವೋರುಚಿರಃ – ಅಂದರೆ ಗುರುವಾರ ಸಂಚಾರ ಮಾಡುವುದು.

ಗಿಡಗ ಪಕ್ಷಿ ಸ್ಥಿತಿ – ಕೃಷ್ಣ ಪಕ್ಷದ ರಾತ್ರಿಯಲ್ಲಿ
ಜನೇಟಿ ಗುಣೋಃ – ಶುಕ್ರವಾರದಲ್ಲಿ ಸಂಚಾರ ಮಾಡುವುದು.

**ಶುಕ್ಲ ಪಕ್ಷಗಳಲ್ಲಿ ಗಿಡಗ ಪಕ್ಷಿಯ ಸಂಚಾರ ಕ್ರಮದ**

**ಶ್ಲೋಕ :**

॥ ಆದಿತ್ಯ ಭೌಮಶ್ಯೇನಂಚ ಶುಕ್ಲಪಕ್ಷಂಚಚಕ್ರಯೋಃ ॥

ಕೃಷ್ಣ ಪಕ್ಷಗಳಲ್ಲಿ ಗಿಡಗ ಪಕ್ಷಿಯ ಸಂಚಾರ ಕ್ರಮದ ಶ್ಲೋಕ :
॥ಭೃಗುಶ್ಯೇನ ವಿಹಂಗಂಚ ಕೃಷ್ಣ ಪಕ್ಷಂಚಚಕ್ರಯೋಃ ॥
ಶುಕ್ಲ ಪಕ್ಷದಲ್ಲಿ ಗಿಡಗ ಪಕ್ಷಿಯ ಪಂಚಾವಸ್ಥೆಯ ಫಲಗಳು

ಮೊದಲನೇ ಜಾವದಲ್ಲಿ – ಭೋಜನ ಫಲ

ಈ ಫಲವು ಅತ್ಯಂತ ಶುಭವಾದುದಾಗಿರುತ್ತದೆ. ಮನೆ ಬಿಟ್ಟು ಹೋದವರು ಹಿಂತಿರುಗಿ ಬರುತ್ತಾರೆ. ಯಾವುದೇ ರೀತಿಯ ಚಿಂತೆಯು ಇರುವುದಿಲ್ಲ. ಎಲ್ಲಾ ರೀತಿಯ ಕ್ಷೇಮ ಇರುತ್ತದೆ. ಸಕಾಲಕ್ಕೆ ಚೆನ್ನಾಗಿ ಮಳೆ ಬೀಳುತ್ತದೆ. ಬೆಳೆಯೂ ಚೆನ್ನಾಗಿ ಆಗುತ್ತದೆ. ಎಲ್ಲಾ ರೀತಿಯ ರೋಗಗಳು ನಿವಾರಣೆಯಾಗುವುದು. ಒಳ್ಳೆಯ ಕನ್ಯೆಯು ವಿವಾಹವಾಗಲು ದೊರೆಯುತ್ತಾಳೆ. ಸುಪುತ್ರವಾಗಿ ಹೆರಿಗೆ ಆಗುತ್ತದೆ. ಎಲ್ಲಾ ಕಾರ್ಯಗಳಲ್ಲಿ ಜಯ ಉಂಟಾಗುತ್ತದೆ. ವ್ಯಾಪಾರದಲ್ಲಿ ಅಧಿಕ ಲಾಭ ದೊರೆಯುತ್ತದೆ. ಸುಖಸಂತೋಷಗಳಿರುತ್ತವೆ.

ಎರಡನೇ ಜಾವದಲ್ಲಿ – ಗಮನಫಲ

ಈ ಜಾವದಲ್ಲಿ ಯಾವುದೇ ಕಾರಣಕ್ಕೂ ಪ್ರಯಾಣವನ್ನು ಮಾಡಬಾರದು. ಬೆಳೆ ತಿಸ್ಯೇನು ಚೆನ್ನಾಗಿ ಆಗುವುದಿಲ್ಲ. ಹೆಣ್ಣನ್ನು ಪಡೆದು

ಕೊಳ್ಳಲು ಬಹಳ ಪ್ರಯತ್ನಪಟ್ಟರೂ ಸಹ ಕಾರ್ಯ ಸಾಧನೆ ಆಗುವುದಿಲ್ಲ. ವಿಶೇಷವಾಗಿ ಹಣ ಲಾಭ ಆಗುವುದಿಲ್ಲ. ಎಲ್ಲಾ ಕೆಲಸದಲ್ಲೂ ಸಹ ಮಧ್ಯಮ ಫಲ ದೊರಕುವುದು.

ಮೂರನೇ ಜಾವದಲ್ಲಿ – ರಾಜ್ಯಫಲ

ಮೇಲು ಅಧಿಕಾರಿಗಳಿಂದ ಮುಖಂಡರಿಂದ ಹೆಚ್ಚು ಲಾಭ ಉಂಟಾಗುವುದು. ಕಷ್ಟ ನಿವಾರಣೆಯಾಗುವುದು. ಕೈಗೊಂಡ ಕಾರ್ಯದಲ್ಲಿ ಜಯ ದೊರಕುವುದು. ಅನೇಕ ರೀತಿಯ ಉಡುಗೊರೆಗಳು ಪ್ರಾಪ್ತಿಯಾಗುವವು. ಹಳೆಯ ರೋಗಗಳೂ ಸಹ ಗುಣವಾಗುವವು. ಶತ್ರುಗಳ ಭಯವಿರುವುದಿಲ್ಲ. ಕಳೆದುಕೊಂಡ ವಸ್ತುಗಳು ಪುನಃ ದೊರಕುತ್ತವೆ. ವ್ಯಾಪಾರದಲ್ಲಿ ವಿಶೇಷ ಲಾಭ ಉಂಟಾಗುತ್ತದೆ. ಕಾರ್ಯಸಾಧನೆ ಸುಲಭವಾಗಿ ಆಗುತ್ತದೆ. ಭೋಜನ ಫಲದಲ್ಲಿದ್ದಂತೆಯೇ ಸುಖ-ಸಮೃದ್ಧಿ ಇರುವುದು.

ನಾಲ್ಕನೇ ಜಾವದಲ್ಲಿ – ನಿದ್ರೆಯ ಫಲ

ಪೀಡಿಸುತ್ತಿರುವ ರೋಗಗಳು ನಿವಾರಣೆಯಾಗುವುದಿಲ್ಲ. ವಿದೇಶಕ್ಕೆ ಹೋದವರು ಹಿಂತಿರುಗಿ ಬರುವುದಿಲ್ಲ. ಯಾವುದೇ ರೀತಿಯ ಫಲ ಪ್ರಾಪ್ತಿಯಾಗುವುದಿಲ್ಲ. ವ್ಯಾಪಾರದಲ್ಲಿ ಲಾಭವಿರುವುದಿಲ್ಲ. ಎಲ್ಲಾ ರೀತಿಯ ನಷ್ಟವೇ ಉಂಟಾಗುವುದು. ಎಲ್ಲಾ ರೀತಿಯಲ್ಲಿ ಕೇಡು ಉಂಟಾಗುವುದು. ಮಳೆ ಇಲ್ಲದೆ ಬರ ಪ್ರಾಪ್ತಿಯಾಗುವುದು. ಸದಾ ಮನಸ್ಸಿನಲ್ಲಿ ಚಿಂತೆ ಕಾಡುವುದು.

ಐದನೇ ಜಾವದಲ್ಲಿ – ಮರಣ ಫಲ

ಹತ್ತಿರದ ಸಂಬಂಧಿಕರ, ಮಿತ್ರರ ಮರಣ ವಾರ್ತೆಯನ್ನು ಕೇಳಬೇಕಾಗಿ ಬರುವುದು. ರೋಗ ಗುಣವಾಗುವುದಿಲ್ಲ. ಕೈಗೊಂಡ ಕಾರ್ಯದಲ್ಲಿ ಅಪಜಯವೇ ಉಂಟಾಗುವುದು. ಬೆಲೆಬಾಳುವ ವಸ್ತುಗಳನ್ನು ಕಳೆದುಕೊಳ್ಳಬೇಕಾಗಿ ಬರುವುದು. ಮನಸ್ಸಿನಲ್ಲಿ ಚಂಚಲತೆ ಉಂಟಾಗುವುದು. ರೋಗಗಳು ಉಲ್ಬಣವಾಗುವವು. ಹೆಣ್ಣು ಮಕ್ಕಳು, ಸಂಬಂಧಿಕರು ನಿಂದನೆ ಮಾಡುವರು. ಹೆಚ್ಚು ನಷ್ಟವನ್ನು ಅನುಭವಿಸಬೇಕಾಗುವುದು. ನಿದ್ರೆಯ ಫಲದಲ್ಲಿರುವಂತೆ ಯಾವುದೇ ರೀತಿಯ ಫಲ ಪ್ರಾಪ್ತಿಯಾಗುವುದಿಲ್ಲ.

## ಕೃಷ್ಣ ಪಕ್ಷ ಗಿಡಗ ಪಕ್ಷಿಯ ಪಂಚಾವಸ್ಥೆಯ ಫಲಗಳು

ಮೊದಲನೇ ಜಾವದಲ್ಲಿ – ಭೋಜನ ಫಲ

ಯಾವುದೇ ರೀತಿಯ ಜಗಳ ಉಂಟಾಗುವುದಿಲ್ಲ. ಎಲ್ಲಾ ರೀತಿಯಲ್ಲಿ ಲಾಭವು ಉಂಟಾಗುವುದು. ಖಾಯಿಲೆಗಳು ಶೀಘ್ರವೇ ಗುಣವಾಗುವವು. ಯಥೇಚ್ಛವಾಗಿ ಮಳೆ ಬೀಳುವುದು. ಯಾವುದೇ ರೀತಿಯ ಪ್ರಯಾಣ ಕೈಗೊಳ್ಳುವ ಸಂಭವವಿರುವುದಿಲ್ಲ. ಬೆಲೆಗಳು ದುಬಾರಿಯಾಗುವವು. ಶುಕ್ಲ ಪಕ್ಷದ ಫಲದಲ್ಲಿದ್ದಂತೆ ವ್ಯಾಪಾರದಲ್ಲಿ ಅಧಿಕ ಲಾಭ ದೊರಕುತ್ತದೆ. ಸುಖ ಸಂತೋಷಗಳಿರುತ್ತವೆ.

ಎರಡನೇ ಜಾವದಲ್ಲಿ – ಗಮನ ಫಲ

ಕೋರ್ಟು ಕಛೇರಿ ವ್ಯವಹಾರಗಳಲ್ಲಿ ಜಯ ದೊರಕುತ್ತದೆ. ರೋಗಗಳು ಶೀಘ್ರವೇ ಗುಣವಾಗುತ್ತವೆ. ಶತೃಗಳ ಭಯವಿರುವುದಿಲ್ಲ. ಎಲ್ಲಾ ಕೆಲಸಗಳಲ್ಲಿ ಶುಭ ಉಂಟಾಗುವುದು. ಚೆನ್ನಾಗಿ ಮಳೆ ಬೀಳುವುದು ದೂರ ದೇಶಕ್ಕೆ ಹೋದವರು ಹಿಂತಿರುಗಿ ಬರುತ್ತಾರೆ. ಮನಸ್ಸು ನೆಮ್ಮದಿಯಿಂದ ಕೂಡಿರುವುದು. ಎಲ್ಲಾ ರೀತಿಯಲ್ಲಿಯೂ ಒಳ್ಳೆಯ ಫಲವು ಪ್ರಾಪ್ತಿಯಾಗುವುದು.

ಮೂರನೇ ಜಾವದಲ್ಲಿ – ರಾಜ್ಯ ಫಲ

ಎಲ್ಲಾ ಕಾರ್ಯಗಳಲ್ಲಿ ಸುಲಭವಾಗಿ ಜಯ ದೊರಕುತ್ತದೆ. ಪ್ರಯಾಣ ಮಾಡಿದರೆ ಹೆಚ್ಚು ಲಾಭ ಉಂಟಾಗುತ್ತದೆ. ಹೆಚ್ಚಾಗಿ ಮಳೆ ಸುರಿಯುವ ಸಂಭವವಿರುವುದಿಲ್ಲ. ಬಂಧುಗಳೊಡನೆ ಮಿತ್ರರೊಡನೆ ಜಗಳ ಉಂಟಾಗುವುದಿಲ್ಲ. ಕೋರ್ಟು ಕಛೇರಿಗಳಲ್ಲಿ ಕಾರ್ಯ ಜಯವಾಗುತ್ತದೆ. ಶತ್ರುಗಳ ಭಯವಿರುವುದಿಲ್ಲ. ಕೈ ಹಾಕಿದ ಕಾರ್ಯಗಳು ಸುಸೂತ್ರವಾಗಿ ನೆರವೇರುವುದು. ಎಲ್ಲಾ ರೀತಿಯಲ್ಲಿ ಶುಭವೇ ಉಂಟಾಗುವುದು.

ನಾಲ್ಕನೇ ಜಾವದಲ್ಲಿ – ನಿದ್ರೆಯ ಫಲ

ಹಳೆಯ ರೋಗದ ಜೊತೆಗೆ ಹೊಸ ರೋಗವು ಸೇರಿಕೊಂಡು ಹೆಚ್ಚು ಹಿಂಸೆಯನ್ನು ಅನುಭವಿಸಬೇಕಾಗುವುದು. ಮಳೆ ಬೀಳದೆ ಅನೇಕ ರೀತಿಯ ಸೋಂಕು ರೋಗಗಳು ಉದ್ಭವಿಸುವವು. ಬೆಳೆಗಳು ನಷ್ಟವಾಗಿ ಕುಡಿಯುವ

ನೀರಿಗೇ ಪರದಾಡಬೇಕಾಗಿ ಬರುವುದು. ಯಾವ್ದೇ ಕಾರ್ಯದಲ್ಲಿ ಜಯದೊರಕುವುದಿಲ್ಲ. ಮನೋರೋಗಗಳು ಹೆಚ್ಚಾಗಿ ಪೀಡಿಸುವವು. ಹೆಚ್ಚು ಕಷ್ಟವೇ ಉತ್ಪನ್ನವಾಗುವುದು.

ಐದನೇ ಜಾವದಲ್ಲಿ – ಮರಣ ಫಲ

ಎಲ್ಲಾ ಕಾರ್ಯದಲ್ಲೂ ಅಪಜಯವೇ ಉಂಟಾಗುವುದು. ಸರ್ವಸ್ವವನ್ನು ಕಳೆದುಕೊಂಡು ದರಿದ್ರತೆ ಪಡೆಯಬೇಕಾಗುವುದು. ಬಂಧುಮಿತ್ರರು ಶತ್ರುಗಳಾಗುವರು. ಶುಭಕಾರ್ಯಗಳೆಲ್ಲಾ ಅಶುಭವಾಗಿಯೇ ಕಂಡುಬರುವವು. ಆಹಾರಕ್ಕೆ ಪರದಾಡಬೇಕಾಗುವುದು. ಎಲ್ಲರೂ ನಿಂದಿಸುವರು. ವ್ಯಾಪಾರದಲ್ಲಿ ಹೆಚ್ಚು ನಷ್ಟವುಂಟಾಗುವುದು. ಮನೆಯಲ್ಲಿ ಸದಾ ಕಲಹವೇ ಉಂಟಾಗುವುದು. ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ರೋಗ ಪೀಡಿತರಾಗಿರುವವರಿಗೆ ಮರಣವು ಪ್ರಾಪ್ತಿಯಾಗುವುದು.

**ಶುಕ್ಲ ಪಕ್ಷದಲ್ಲಿ ಏಳು ದಿನಗಳಲ್ಲಿ ಗಿಡಗ ಪಕ್ಷಿ ಸ್ಥಿತಿಗಳು**

ಶುಕ್ಲ ಪಕ್ಷ ಭಾನುವಾರ – ಮಂಗಳವಾರ ಹಗಲು ಚಕ್ರ

**ವಾಕ್ಯ – ಹರಿಸುಕೇಶೋ**

ಮೊದಲನೇ ಜಾವ – ಭೋಜನ ಫಲ

ಎರಡನೇ ಜಾವ – ಗಮನ ಫಲ

ಮೂರನೇ ಜಾವ – ರಾಜ್ಯ ಫಲ

ನಾಲ್ಕನೇ ಜಾವ – ನಿದ್ರೆ ಫಲ

ಐದನೇ ಜಾವ – ಮರಣ ಫಲ

**ಶುಕ್ಲ ಪಕ್ಷ ಭಾನುವಾರ-ಮಂಗಳವಾರ ರಾತ್ರಿ ಚಕ್ರ**

ವಾಕ್ಯ – ರುಚಿರ ಭೋಧ್ಯೈಃ

ಮೊದಲನೇ ಜಾವ – ಮರಣ ಫಲ

ಎರಡನೇ ಜಾವ – ಗಮನ ಫಲ

ಮೂರನೇ ಜಾವ – ನಿದ್ರೆಯ ಫಲ

ನಾಲ್ಕನೇ ಜಾವ – ಭೋಜನ ಫಲ

ಐದನೇ ಜಾವ – ರಾಜ್ಯಫಲ

**ಶುಕ್ಲ ಪಕ್ಷ ಸೋಮವಾರ-ಬುಧವಾರ ಹಗಲು ಚಕ್ರ**

ವಾಕ್ಯ – ವಿಷ್ಣು ದೇವೋಹು

ಮೊದಲನೆ ಜಾವ – ಮರಣ ಫಲ
ಎರಡನೇ ಜಾವ - ಭೋಜನ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ನಿದ್ರೆ ಫಲ

**ಶುಕ್ಲ ಪಕ್ಷ ಸೋಮವಾರ-ಬುಧವಾರ ರಾತ್ರಿ ಚಕ್ರ**

ವಾಕ್ಯ – ಧೇನು ವಿಕ್ರಯೌ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಮರಣ ಫಲ

**ಶುಕ್ಲ ಪಕ್ಷ ಗುರುವಾರ ಹಗಲು ಚಕ್ರ**

ವಾಕ್ಯ – ಉಪೇಂದ್ರೋಹರಿಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ - ಗಮನ ಫಲ
ಐದನೇ ಜಾವ – ರಾಜ್ಯ ಫಲ

**ಶುಕ್ಲ ಪಕ್ಷ ಗುರುವಾರ ರಾತ್ರಿ ಚಕ್ರ**

ವಾಕ್ಯ – ಭೋಧೇನುವಿಪ್ರಾಃ

ಮೊದಲನೇ ಜಾವ – ನಿದ್ರೆ ಫಲ

ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ಗಮನ ಫಲ

**ಶುಕ್ಲ ಪಕ್ಷ ಶುಕ್ರವಾರ ಹಗಲು ಚಕ್ರ**

ವಾಕ್ಯ – ಏಕೋವಾವಿಭುಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ಗಮನ ಫಲ

**ಶುಕ್ಲ ಪಕ್ಷ ಶುಕ್ರವಾರ ರಾತ್ರಿ ಚಕ್ರ**

ವಾಕ್ಯ – ನಯೋ ಕೇಸುಷಿ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ನಿದ್ರೆ ಫಲ

**ಶುಕ್ಲ ಪಕ್ಷ ಶನಿವಾರ ಹಗಲು ಚಕ್ರ**

ವಾಕ್ಯ – ಓಶಧಿಗುಣ್ಯೋ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ನಿದ್ರೆ ಫಲ

ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ಭೋಜನ ಫಲ

### ಕೃಷ್ಣಪಕ್ಷ ಶನಿವಾರ ರಾತ್ರಿ ಚಕ್ರ

### ವಾಕ್ಯ – ಏವಾರೋಧೇನುಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ಭೋಜನ ಫಲ

### ಕೃಷ್ಣಪಕ್ಷ ಭಾನುವಾರ-ಮಂಗಳವಾರ ಹಗಲು ಚಕ್ರ

### ವಾಕ್ಯ – ದೇವಗುರೋಧಿಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ರಾಜ್ಯ ಫಲ

### ಕೃಷ್ಣಪಕ್ಷ ಭಾನುವಾರ-ಮಂಗಳವಾರ ರಾತ್ರಿ ಚಕ್ರ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ರಾಜ್ಯ ಫಲ

### ಕೃಷ್ಣಪಕ್ಷ ಸೋಮವಾರ-ಶನಿವಾರ ಹಗಲು ಚಕ್ರ

ವಾಕ್ಯ – ಜ್ಯೋತಿಸ್ಸ್ವರೇವಾಸುಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ಮರಣ ಫಲ

### ಕೃಷ್ಣಪಕ್ಷ ಸೋಮವಾರ-ಶನಿವಾರ ರಾತ್ರಿ ಚಕ್ರ

ವಾಕ್ಯ – ದೇಶಿಕೋಸರಾಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ಗಮನ ಫಲ

### ಕೃಷ್ಣಪಕ್ಷ ಬುಧವಾರ ಹಗಲು ಚಕ್ರ

ವಾಕ್ಯ – ಗುರೋವಿಧೆಯುಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ಭೋಜನ ಫಲ

## ಕೃಷ್ಣ ಪಕ್ಷ ಬುಧವಾರ ರಾತ್ರಿ ಚಕ್ರ

ವಾಕ್ಯ – ವಿಷ್ಣೋರ್ಮುರಾರೇಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಭೋಜನ ಫಲ

## ಕೃಷ್ಣ ಪಕ್ಷ ಗುರುವಾರ ಹಗಲು ಚಕ್ರ

ವಾಕ್ಯ – ವಿಶೇಷಗುಣೋಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ನಿದ್ರೆ ಫಲ

## ಕೃಷ್ಣ ಪಕ್ಷ ಗುರುವಾರ ರಾತ್ರಿ ಚಕ್ರ

ವಾಕ್ಯ – ಸುಜನೈರ್ವಿಭೋಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ನಿದ್ರೆ ಫಲ

## ಕೃಷ್ಣಪಕ್ಷ ಶುಕ್ರವಾರ ಹಗಲು ಚಕ್ರ

### ವಾಕ್ಯ – ಸುಗುಣೋನ್ನಿತೇಃ

ಮೊದಲನೇ ಜಾವ – ಭೋಜನ ಫಲ

ಎರಡನೇ ಜಾವ – ಮರಣ ಫಲ

ಮೂರನೇ ಜಾವ – ನಿದ್ರೆ ಫಲ

ನಾಲ್ಕನೇ ಜಾವ – ರಾಜ್ಯ ಫಲ

ಐದನೇ ಜಾವ – ಗಮನ ಫಲ

## ಕೃಷ್ಣಪಕ್ಷ ಶುಕ್ರವಾರ ರಾತ್ರಿ ಚಕ್ರ

### ವಾಕ್ಯ – ಸೋಮುಖವ್ಯೈರಃ

ಮೊದಲನೇ ಜಾವ – ರಾಜ್ಯ ಫಲ

ಎರಡನೇ ಜಾವ – ಭೋಜನ ಫಲ

ಮೂರನೇ ಜಾವ – ನಿದ್ರೆ ಫಲ

ನಾಲ್ಕನೇ ಜಾವ – ಗಮನ ಫಲ

ಐದನೇ ಜಾವ – ಮರಣ ಫಲ

ಶುಕ್ಲಪಕ್ಷ ಹಗಲು ಏಳು ವಾರಗಳ ಗಿಡಗ ಪಕ್ಷಿ ಸ್ಥಿತಿ ನಿರೂಪಣ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಭೋಜನ ಫಲ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ |
| ಸೋಮವಾರ ಬುಧವಾರ | ಮರಣ ಫಲ | ಭೋಜನ ಫಲ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ |
| ಗುರುವಾರ | ನಿದ್ರೆ ಫಲ | ಮರಣ ಫಲ | ಭೋಜನ ಫಲ | ಗಮನ ಫಲ | ರಾಜ್ಯ ಫಲ |
| ಶುಕ್ರವಾರ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ | ಭೋಜನ ಫಲ | ಗಮನ ಫಲ |
| ಶನಿವಾರ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ | ಭೋಜನ ಫಲ |

ಶುಕ್ಲ ಪಕ್ಷ ರಾತ್ರಿ ಏಳು ವಾರಗಳ ಗಿಡಗ ಪಕ್ಷಿ ಸ್ಥಿತಿ ನಿರೂಪಣ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಮರಣ ಫಲ | ಗಮನ ಫಲ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ |
| ಸೋಮವಾರ ಬುಧವಾರ | ಗಮನ ಫಲ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ | ಮರಣ ಫಲ |
| ಗುರುವಾರ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ | ಮರಣ ಫಲ | ಗಮನ ಫಲ |
| ಶುಕ್ರವಾರ | ಭೋಜನ ಫಲ | ರಾಜ್ಯ ಫಲ | ಮರಣ ಫಲ | ಗಮನ ಫಲ | ನಿದ್ರೆ ಫಲ |
| ಶನಿವಾರ | ರಾಜ್ಯ ಫಲ | ಮರಣ ಫಲ | ಗಮನ ಫಲ | ನಿದ್ರೆ ಫಲ | ಭೋಜನ ಫಲ |

ಕೃಷ್ಣ ಪಕ್ಷ ಹಗಲು ಏಳು ವಾರಗಳ ಗಿಡಗ ಪಕ್ಷಿ ಸ್ಥಿತಿ ನಿರೂಪಣ ಏಳಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಗಮನ ಫಲ | ಭೋಜನ ಫಲ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ |
| ಸೋಮವಾರ ಶನಿವಾರ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ | ಭೋಜನ ಫಲ | ಮರಣ ಫಲ |
| ಬುಧವಾರ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ | ಭೋಜನ ಫಲ |
| ಗುರುವಾರ | ರಾಜ್ಯ ಫಲ | ಗಮನ ಫಲ | ಭೋಜನ ಫಲ | ಮರಣ ಫಲ | ನಿದ್ರೆ ಫಲ |
| ಶುಕ್ರವಾರ | ಭೋಜನ ಫಲ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ |

ಕೃಷ್ಣ ಪಕ್ಷ ರಾತ್ರಿ ಏಳು ವಾರಗಳ ಗಿಡಗ ಪಕ್ಷಿ ಸ್ಥಿತಿ ನಿರೂಪಣಾ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಭೋಜನ ಫಲ | ನಿದ್ರೆ ಫಲ | ಗಮನ ಫಲ | ಮರಣ ಫಲ | ರಾಜ್ಯ ಫಲ |
| ಸೋಮವಾರ ಶನಿವಾರ | ಮರಣ ಫಲ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ | ಗಮನ ಫಲ |
| ಬುಧವಾರ | ನಿದ್ರೆ ಫಲ | ಗಮನ ಫಲ | ಮರಣ ಫಲ | ರಾಜ್ಯ ಫಲ | ಭೋಜನ ಫಲ |
| ಗುರುವಾರ | ಗಮನ ಫಲ | ಮರಣ ಫಲ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ |
| ಶುಕ್ರವಾರ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ | ಗಮನ ಫಲ | ಮರಣ ಫಲ |

ಗಿಡಗ ಪಕ್ಷಿಗೆ ಕೆಲವು ದಿನಗಳಲ್ಲಿ ಪ್ರಾಣವು ಇರುವುದಿಲ್ಲ. ಅಂತಹ ದಿವಸಗಳಲ್ಲಿ ಗಿಡಗ ಪಕ್ಷಿಯು ಮೇಲಾದ ಸ್ಥಿತಿಯನ್ನು ಹೊಂದಿದ್ದರೂ ಸಹ ನಿಷ್ಫಲವೆಂದು ತಿಳಿದುಕೊಳ್ಳಬಹುದು.

## ನಿರ್ಜೀವ ಗಿಡಗ ಪಕ್ಷಿ ಚಕ್ರ

ಶುಕ್ಲ ಪಕ್ಷದಲ್ಲಿ—ಗುರುವಾರ, ಶನಿವಾರ
ಕೃಷ್ಣ ಪಕ್ಷದಲ್ಲಿ—ಮಂಗಳವಾರ

ಮೇಲೆ ತಿಳಿಸಿರುವ ಶುಕ್ಲ–ಕೃಷ್ಣ ಪಕ್ಷಗಳಲ್ಲಿನ ಆ ದಿನಗಳಲ್ಲಿ ಗಿಡಗ ಪಕ್ಷಿ ನಿರ್ಜೀವವಾಗಿರುವುದರಿಂದ ಗಿಡಗ ಪಕ್ಷಿ ಭೋಜನ, ರಾಜ್ಯಸ್ಥಿತಿಯನ್ನು ಹೊಂದಿದ್ದರೂ ಉಪಯೋಗವಿಲ್ಲ ಹಾಗೂ ಆ ದಿನಗಳಲ್ಲಿ ಗಿಡಗ ಪಕ್ಷಿ ನಿದ್ರೆ, ಮರಣ ಸ್ಥಿತಿಯಲ್ಲಿದ್ದರೆ ಯಾವ ಕಾರ್ಯವೂ ಸಫಲವಾಗುವುದಿಲ್ಲವೆಂಬುದನ್ನು ತಿಳಿದುಕೊಳ್ಳಬೇಕು.

ಪ್ರಶ್ನೆಗೆ ಅನುಗುಣವಾಗಿ ಶುಕ್ಲ–ಕೃಷ್ಣ ಪಕ್ಷಗಳ ಅಂಗಪಕ್ಷಿ ಕ್ರಮ

ಆಕಾರ ಶಬ್ದವು ನಾಮದ (ಹೆಸರಿನ) ಮೊದಲಲ್ಲಿದ್ದರೆ
ಕಾಲು – ಗಿಡಗವಾಗಿರುತ್ತದೆ
ಉದಾಹರಣೆ – ರಾಮ (ಆಕಾರ)

ಇಕಾರ ಶಬ್ದವು ಹೆಸರಿನ ಮೊದಲಿದ್ದರೆ
ದೇಹದ ಎರಡು ಕಡೆ (ಎದೆ ಬೆನ್ನು) – ಗಿಡಗವಾಗಿರುತ್ತದೆ
ಉದಾಹರಣೆ – ಸೀತೆ (ಇಕಾರ)

ಉಕಾರ ಶಬ್ದವು ಹೆಸರಿನ ಮೊದಲಿದ್ದರೆ
ದೇಹ – ಗಿಡಗವಾಗಿರುತ್ತದೆ
ಉದಾಹರಣೆ – ಪುರುಷೋತ್ತಮ (ಉಕಾರ)

ಎಕಾರ ಶಬ್ದವು ಹೆಸರಿನ ಮೊದಲಲ್ಲಿದ್ದರೆ
ಕೈಗಳು – ಗಿಡಗವಾಗಿರುತ್ತದೆ
ಉದಾಹರಣೆ – ವೆಂಕಟೇಶ (ಎಕಾರ)

ಒಕಾರ ಶಬ್ದವು ಹೆಸರಿನ ಮೊದಲಲ್ಲಿದ್ದವರಿಗೆ

(ತಲೆ) ಶಿರಸ್ಸು – ಗಿಡಗವಾಗಿರುತ್ತದೆ.

ಉದಾಹರಣೆ – ದೊರೆ (ಒಕಾರ)

ಪ್ರಶ್ನೆಗಳಿಗೆ ಉತ್ತರ ಕೊಡುವವರು ತಿಳಿಯಬೇಕಾದ ಮುಖ್ಯ ವಿಷಯಗಳು :

ಪ್ರಶ್ನೆ ಕೇಳುವವರಿಗೆ ಉತ್ತರ ಹೇಳುವವರು ಪ್ರಶ್ನೆ ಕೇಳಿದವರ ಪಕ್ಷಿ ಯಾವ ವಾರದಲ್ಲಿ, ಯಾವ ಕಾಲದಲ್ಲಿ, ಯಾವ ದಿಕ್ಕಿನಲ್ಲಿ, ಯಾವ ಸ್ಥಿತಿಯಲ್ಲಿ ರುವುದೆಂಬುದನ್ನು ತಿಳಿದುಕೊಂಡು ಹಾಗೂ ಯಾರ ವಿಷಯದಲ್ಲಿ ಕೇಳುವರೋ ಅಂಥವರ ಪಕ್ಷಿಯನ್ನೂ ಸಹ ತಿಳಿದುಕೊಂಡು ಆ ಸಮಯದಲ್ಲಿರುವ ಫಲವನ್ನು ಹೇಳಬೇಕು.

ಗಿಡಗ ಪಕ್ಷಿ ಸ್ಥಿತಿ ಆರು ಘಳಿಗೆಗಳಾಗಿದ್ದರೂ ಸಹ ಪ್ರತಿ ಸ್ಥಿತಿಯಲ್ಲಿಯೂ ಅದು ಅಂತರವಾಗಿ ಸಂಚಾರ ಮಾಡುತ್ತದೆ.

**ಶುಕ್ಲ ಪಕ್ಷ ಹಗಲು – ರಾತ್ರಿ ಗಿಡಗ ಪಕ್ಷಿ ಸ್ಥಿತಿ ಅಂತರ್ಭಾಗ ಕಾಲ ಘಳಿಗೆ ವಿವರಣೆ**

ಶುಕ್ಲ ಪಕ್ಷ ಹಗಲಿನಲ್ಲಿ

ಭೋಜನ ಕಾಲ ಘಳಿಗೆ – ೧॥ ($1\frac{1}{2}$)

ಗಮನ ಕಾಲ ಘಳಿಗೆ – ೧॥ ($1\frac{1}{2}$)

ರಾಜ್ಯ ಕಾಲ ಘಳಿಗೆ – ೨ (2)

ನಿದ್ರಾ ಕಾಲ ಘಳಿಗೆ – ।।। ($\frac{3}{4}$)

ಮರಣ ಕಾಲ ಘಳಿಗೆ – । ($\frac{1}{4}$)

ಒಟ್ಟು ಘಳಿಗೆ – ೬ (6)

ಶುಕ್ಲ ಪಕ್ಷ ರಾತ್ರಿಯಲ್ಲಿ

ಭೋಜನ ಕಾಲ ಘಳಿಗೆ – ೧। ($1\frac{1}{4}$)

ಗಮನ ಕಾಲ ಘಳಿಗೆ – ೧। ($1\frac{1}{4}$)

ರಾಜ್ಯ ಕಾಲ ಘಳಿಗೆ – ೧ (1)

ನಿದ್ರಾ ಕಾಲ ಘಳಿಗೆ – ೧ (1)
ಮರಣ ಕಾಲ ಘಳಿಗೆ – ೧|| ($1\frac{1}{2}$)
ಅಂತು ಘಳಿಗೆ – ೬ (6)

## ಕೃಷ್ಣ ಪಕ್ಷ ಹಗಲು – ರಾತ್ರಿ ಗಿಡಗ ಪಕ್ಷಿ ಸ್ಥಿತಿ ಅಂತರ್ಭಾಗ ಕಾಲು ಘಳಿಗೆ ವಿವರಣೆ

### ಕೃಷ್ಣ ಪಕ್ಷ ಹಗಲಿನಲ್ಲಿ

ಭೋಜನ ಕಾಲ ಘಳಿಗೆ – ೨ (2)
ಗಮನ ಕಾಲ ಘಳಿಗೆ – ೧|| ($\frac{1}{2}$)
ರಾಜ್ಯ ಕಾಲ ಘಳಿಗೆ – ||| ($\frac{3}{4}$)
ನಿದ್ರಾ ಕಾಲ ಘಳಿಗೆ – || ($\frac{1}{2}$)
ಮರಣ ಕಾಲ ಘಳಿಗೆ – ೧| ($1\frac{1}{4}$)
ಅಂತು ಘಳಿಗೆ – ೬ (6)

### ಕೃಷ್ಣ ಪಕ್ಷ ರಾತ್ರಿಯಲ್ಲಿ

ಭೋಜನ ಕಾಲ ಘಳಿಗೆ – ೧||| ($1\frac{3}{4}$)
ಗಮನ ಕಾಲ ಘಳಿಗೆ – ೧|| ($1\frac{1}{2}$)
ರಾಜ್ಯ ಕಾಲ ಘಳಿಗೆ – ||| ($\frac{3}{4}$)
ನಿದ್ರಾ ಕಾಲ ಘಳಿಗೆ – ||| ($\frac{3}{4}$)
ಮರಣ ಕಾಲ ಘಳಿಗೆ – ೧| ($1\frac{1}{4}$)
ಅಂತು ಘಳಿಗೆ – ೬ (6)

ಶುಕ್ಲ ಪಕ್ಷ ಭಾನುವಾರ, ಮಂಗಳವಾರಗಳಲ್ಲಿ ಗಿಡಗ ಪಕ್ಷಿ ಒಂದೇ ರೀತಿಯಲ್ಲಿ ಸಂಚಾರ ಮಾಡುವುದರಿಂದ ಕೆಲವು ಚಕ್ರಗಳನ್ನು ಎರಡು ವಾರಕ್ಕೂ ಒಟ್ಟಾಗಿಯೇ ಬರೆಯಲಾಗಿದೆ.

ಭಾನುವಾರ, ಮಂಗಳವಾರಗಳಲ್ಲಿ ಮೊದಲನೇ ಜಾವ ಆರು ಘಳಿಗೆಯೊಳಗೆ

ಗಿಡಗ – ೧॥ ($1\frac{1}{2}$) ಘಳಿಗೆ ಭೋಜನ ಕಾಲ

ಎರಡನೇ ಜಾವ ಆರು ಘಳಿಗೆಯೊಳಗೆ

ಗಿಡಗ – ೧। ($1\frac{1}{4}$) ಘಳಿಗೆ ಗಮನ ಕಾಲ

ಇದೇ ರೀತಿ ಉಳಿದವೆಲ್ಲವನ್ನೂ ಆ ವಾರ ಚಕ್ರಗಳನ್ನು ನೋಡಿ ಸುಲಭವಾಗಿ ತಿಳಿದುಕೊಳ್ಳಬಹುದು.

ಅಂತರ್ಭಾಗದಲ್ಲಿ ಶುಕ್ಲ – ಕೃಷ್ಣ ಪಕ್ಷ ಅಕ್ಷರಗಳು

ಶುಕ್ಲ ಪಕ್ಷದಲ್ಲಿ—ಅಕಾರ – ಗಿಡಗ

ಕೃಷ್ಣ ಪಕ್ಷದಲ್ಲಿ—ಇಕಾರ – ಗಿಡಗ

ಇದೇ ರೀತಿ ಅಂತರ್ಭಾಗ ಪಕ್ಷಿ ಶಾಸ್ತ್ರದ ಕರ್ತರಾದ ರೋಮಕ ಮಹರ್ಷಿ ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಹಲವರು ಶುಕ್ಲ ಪಕ್ಷ ಅಕ್ಷರಗಳನ್ನೇ ಕೃಷ್ಣ ಪಕ್ಷಕ್ಕೂ ಉಪಯೋಗಿಸುತ್ತಾರೆ. ಹಾಗಿದ್ದರೂ ಸಹ ಅಂತರ್ಭಾಗಕ್ಕೆ ಮಾತ್ರ ಎರಡು ಪಕ್ಷಗಳಿಗೂ ಬೇರೆ ಬೇರೆ ಅಕ್ಷರಗಳನ್ನು ಉಪಯೋಗಿಸಬಹುದು.



## ಎರಡನೇ ಅಧ್ಯಾಯ

# ಕೌಶಿಕ (ಗೂಬೆ) ಪ್ರಶ್ನ ಶಾಸ್ತ್ರ

ಗೂಬೆಗೆ ವಾಕ್ಯ ಪ್ರಥಮಾಕ್ಷರಗಳು :

ಇ, ಕಿ, ಚಿ, ಟಿ, ತಿ, ಪಿ, ಮಿ, ಯಿ, ರಿ, ವಿ, ಈ, ಕೀ, ಚೀ, ಟೀ, ತೀ, ಪೀ, ಮೀ, ಯೀ, ರೀ, ವೀ.

ಜನ್ಮ ನಕ್ಷತ್ರದಿಂದ, ನಾಮ ನಕ್ಷತ್ರದಿಂದ, ನಾಮಾಧ್ಯಕ್ಷರದ ಮೇಲಿನಿಂದ ಪಕ್ಷಿಗಳನ್ನು ತಿಳಿದುಕೊಳ್ಳುವ ಬಗೆ :

ಗೂಬೆಗೆ ಶುಕ್ಲ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :

ಆರಿದ್ರ, ಪುನರ್ವಸು, ಪುಷ್ಯ, ಆಶ್ಲೇಷ, ಮುಖ, ಪೂರ್ವಫಾಲ್ಗುನ.

ಕೃಷ್ಣ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :

ಶ್ರವಣ, ಧನಿಷ್ಠ, ಶತಭಿಷಾ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ.

ಶುಕ್ಲ ಪಕ್ಷ ತಿಥಿ :

ಶುದ್ಧ ಬಿದಿಗೆ, ಶುದ್ಧ ಸಪ್ತಮಿ, ಶುದ್ಧ ದ್ವಾದಶಿ.

ಶುಕ್ಲ ಪಕ್ಷ ರಾಶಿ :

ಮಿಥುನ, ಕಟಕ, ಕನ್ಯಾ.

ಕೃಷ್ಣ ಪಕ್ಷ ತಿಥಿ :

ಬಹುಳ ಚೌತಿ, ಬಹುಳ ನವಮಿ, ಬಹುಳ ಚತುರ್ದಶಿ.

ಕೃಷ್ಣ ಪಕ್ಷ ರಾಶಿ :

ಮಿಥುನ, ಧನಸ್ಸು, ಕುಂಭ.

ಆರೂಢಕ್ಕೆ ಉಪಯೋಗವಾದ ಶುಕ್ಲಪಕ್ಷ ಕೌಶಿಕ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಬಿಳುಪು | ವೈಶ್ಯ | ವಾಯು | ದಕ್ಷಿಣ | ನವಿಲು, ಕೋಳಿ | ಗಿಡಗ, ಕಾಗೆ |

ಆರೂಢಕ್ಕೆ ಉಪಯೋಗವಾದ ಕೃಷ್ಣಪಕ್ಷ ಕೌಶಿಕ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಕೆಂಪು | ಕ್ಷತ್ರಿಯ | ಅಪ್ಪು ವರುಣ | ಉತ್ತರ | ಗಿಡಗ, ನವಿಲು | ಕಾಗೆ, ಕೋಳಿ |

ಆರೂಢಕ್ಕೆ ಉಪಯೋಗವಾದ ಶುಕ್ಲ-ಕೃಷ್ಣಪಕ್ಷಗಳ ಕೌಶಿಕ ಪಕ್ಷಿ ಚಕ್ರ

| ಅಕ್ಷರಗಳು | ಜಾತಿ | ಗ್ರಹ | ದೇವತೆ | ಆಕಾರ | ಧಾತುಮೂಲ ಜೀವ |
|---|---|---|---|---|---|
| ಇ | ಸ್ತ್ರೀ | ಶುಕ್ರ | ಇಂದ್ರ | ಪಂಚ ಕೋಣ | ಜೀವ |

| ಪಾದ | ರುಚಿ | ವೃಕ್ಷ | ಲೋಹ | ಕಾಲ | ಗಮನಾಗಮನ |
|---|---|---|---|---|---|
| ಚತುಷ್ ಪಾದ | ಮಧುರ | ಲೋಧ್ರ ಗಿಡ | ಬೆಳ್ಳಿ | ಭೂತಕಾಲ | ಗ್ರಾಮವ ಬಿಟ್ಟಾನು |

## ಕೌಶಿಕ ಪಕ್ಷಿಯ ಆಕಾರ ಚಕ್ರ




ಕಾಲ ರೀತಿ ನಿರ್ದೇಶನ :

ಒಂದು ದಿನವನ್ನು 5 ಭಾಗಗಳಾಗಿ ವಿಭಜನೆ ಮಾಡಿದರೆ ಒಂದು ಭಾಗಕ್ಕೆ 6 ಘಳಿಗೆ ದೊರಕುತ್ತದೆ. ಶುಕ್ಲಪಕ್ಷಗಳೊಂದೊಂದಕ್ಕೂ 15 ತಿಥಿಗಳು.

7 ದಿವಸಗಳಿಗೆ 1 ವಾರ

1 ದಿವಸಕ್ಕೆ—30 ಹಗಲು ಘಳಿಗೆಗಳು 30 ರಾತ್ರಿ ಘಳಿಗೆಗಳು

6 ಘಳಿಗೆ—1 ಯಾಮ

ಕೌಶಿಕ ಪಕ್ಷಿ ಸ್ಥಿತಿ ಶುಕ್ಲಪಕ್ಷದ ಹಗಲಿನಲ್ಲಿ:—

ಕರಿಸುಕೇತೋ—ಅಂದರೆ ಸೋಮವಾರ, ಬುಧವಾರಗಳಲ್ಲಿ ಸಂಚಾರ ಮಾಡುವುದು.

ಕೌಶಿಕ ಪಕ್ಷಿ ಸ್ಥಿತಿ ಶುಕ್ಲ ಪಕ್ಷದ ರಾತ್ರಿಯಲ್ಲಿ:–
ಉಪೇಂದ್ರೋಹರಿಃ – ಅಂದರೆ ಶನಿವಾರ ರಾತ್ರಿ ಸಂಚಾರ ಮಾಡುವುದು.

ಕೌಶಿಕ ಪಕ್ಷಿ ಸ್ಥಿತಿ ಕೃಷ್ಣ ಪಕ್ಷದ ಹಗಲಿನಲ್ಲಿ;–
ದೇವೋರುಚಿರಃ – ಅಂದರೆ ಶುಕ್ರವಾರ ಹಗಲು ಸಂಚಾರ ಮಾಡುವುದು.

ಕೌಶಿಕ ಪಕ್ಷಿ ಸ್ಥಿತಿ ಕೃಷ್ಣ ಪಕ್ಷದ ರಾತ್ರಿಯಲ್ಲಿ;–
ಜನೇಟಿ ಗುಣೋಃ – ಅಂದರೆ ಗುರುವಾರ ರಾತ್ರಿ ಸಂಚಾರ ಮಾಡುವುದು.

**ಶುಕ್ಲ ಪಕ್ಷದಲ್ಲಿ ಕೌಶಿಕ ಪಕ್ಷಿಯ ಸಂಚಾರ ಕ್ರಮದ ಶ್ಲೋಕ :**

**॥ ಸೋಮ ಸೌಮ್ಯಂಚ ಕೌಶಿಕಃ ಶುಕ್ಲ ಪಕ್ಷಂಚ ಚಕ್ರಯೋಃ ॥**

ಕೃಷ್ಣ ಪಕ್ಷದಲ್ಲಿ ಕೌಶಿಕ ಪಕ್ಷಿಯ ಸಂಚಾರ ಕ್ರಮದ ಶ್ಲೋಕ :

**॥ ಗುರುವಾರಂಚ ಕೌಶಿಕಃ ಕೃಷ್ಣ ಪಕ್ಷಂಚ ಚಕ್ರಯೋಃ ॥**

ಶುಕ್ಲ ಪಕ್ಷದಲ್ಲಿ ಗಿಡಗ ಪಕ್ಷಿಯ ಪಂಚಾವಸ್ಥೆಯ ಫಲಗಳು

**ಮೊದಲನೇ ಜಾವದಲ್ಲಿ – ಭೋಜನ ಫಲ**

ಮನೆ ಬಿಟ್ಟು ಹೋದವರು ಹಿಂತಿರುಗಿ ಬರುವರು. ಮನಸ್ಸಿನಲ್ಲಿ ಯಾವುದೇ ರೀತಿಯ ಚಿಂತೆಯು ಇರುವುದಿಲ್ಲ. ಎಲ್ಲಾ ಸುಖವಾಗಿ ನಡೆಯುವುದು. ಮಳೆ ಚೆನ್ನಾಗಿ ಆಗುವುದು. ಬೆಳೆ ಸಮೃದ್ಧಿಯಾಗಿ ಬೆಳೆಯುವುದು. ಬಹಳ ಸಮಯದಿಂದ ಪೀಡಿಸುತ್ತಿರುವ ರೋಗಗಳು ದೂರವಾಗುವವು. ಮನ ಮೆಚ್ಚುವ ಮಡದಿ ದೊರಕುವಳು. ಗರ್ಭಿಣಿಯರಿಗೆ ಸುಸೂತ್ರವಾಗಿ ಹೆರಿಗೆ ಆಗುವುದು. ಎಲ್ಲಾ ಕಾರ್ಯಗಳೂ ಸಫಲವಾಗುವವು. ವ್ಯಾಪಾರದಲ್ಲಿ ಹೇರಳವಾಗಿ ಲಾಭ ದೊರಕುವುದು. ಮದುವೆಯಾಗದಿರುವ ಕನ್ಯೆಯರಿಗೆ ಗುಣವಂತ ಪತಿ ದೊರಕುವನು.

ಎರಡನೇ ಜಾವದಲ್ಲಿ – ಗಮನಫಲ

ಇಂತಹ ಸಮಯದಲ್ಲಿ ದೂರದ ಊರಿನ ಪ್ರಯಾಣ ನಿಷೇಧ. ಸಕಾಲಕ್ಕೆ ಮಳೆ ಬೀಳದೆ ಧಾನ್ಯಗಳು ನಶಿಸಿ ಹೋಗುವವು. ಎಷ್ಟೇ ಪ್ರಯತ್ನಪಟ್ಟರೂ

ಎಲ್ಲಾ ರೀತಿಯ ವ್ಯಾಪಾರಗಳಲ್ಲಿ ಲಾಭವು ದೊರಕುವುದಿಲ್ಲ. ಮದುವೆಯಾಗಲು ಒಳ್ಳೆಯ ಲಕ್ಷಣದ ಹುಡುಗಿಯರು ದೊರಕುವುದಿಲ್ಲ. ಮನೆಯಲ್ಲಿ ಸದಾ ಕಿರಿಕಿರಿ ಉಂಟಾಗುವುದು. ಮಿತ್ರರು ಶತ್ರುಗಳಾಗುವರು. ಬಂಧು-ಬಾಂಧವರಲ್ಲಿ ವಿನಾ ಕಾರಣ ವೈಮನಸ್ಯ ಉಂಟಾಗುವುದು.

ಮೂರನೇ ಜಾವದಲ್ಲಿ – ರಾಜ್ಯಫಲ

ರಾಜಕಾರಣಿಗಳಿಂದ ವಿಶೇಷವಾಗಿ ಲಾಭ ಉಂಟಾಗುವುದು. ಬಡತನ ನಿವಾರಣೆಯಾಗುವುದು. ಕೈಹಿಡಿದ ಕಾರ್ಯಗಳು ಯಶಸ್ವಿಯಾಗುವವು. ಜನಗಳ, ಬಂಧು-ಬಾಂಧವರ ಸಹಾಯ ಬೇಕಾದಷ್ಟು ದೊರೆಯುವುದು. ರೋಗಗಳು ಗುಣವಾಗುವವು. ಕಳೆದುಕೊಂಡ ಪದಾರ್ಥಗಳು ಮತ್ತೆ ದೊರಕುವವು. ಶತ್ರುಗಳ ಭಯವಿರುವುದಿಲ್ಲ. ವ್ಯಾಪಾರ ವ್ಯವಹಾರಗಳಲ್ಲಿ ಬಹಳಷ್ಟು ಲಾಭವು ದೊರಕುವುದು. ಕೈ ಹಿಡಿದ ಕಾರ್ಯಗಳು ಸಫಲವಾಗುವವು. ಭೋಜನ ಫಲದಂತೆ ಇಲ್ಲಿಯೂ ಸಹ ಎಲ್ಲಾ ರೀತಿಯ ಅನುಕೂಲಗಳಾಗುವವು.

ನಾಲ್ಕನೇ ಜಾವದಲ್ಲಿ – ನಿದ್ರೆಯ ಫಲ

ರೋಗಗಳು ಮತ್ತಷ್ಟು ಹೆಚ್ಚಾಗುವವು. ಮನೆ ಬಿಟ್ಟು ಹೋದವರು ಹಿಂತಿರುಗಿ ಬರುವುದಿಲ್ಲ. ವ್ಯಾಪಾರದಲ್ಲಿ ನಷ್ಟ ಉಂಟಾಗುವುದು. ಯಾವ ಕಾರ್ಯಕ್ಕೆ ಕೈ ಹಾಕಿದರೂ ಜಯ ದೊರಕುವುದಿಲ್ಲ. ಒಳ್ಳೆಯದು ಮಾಡಿದರೂ ಸಹ ಕೆಟ್ಟ ಫಲವನ್ನೇ ಪಡೆಯಬೇಕಾಗುವುದು. ಮಳೆ ಬೀಳದೆ ಬರಗಾಲ ಉಂಟಾಗುವುದು. ಜೀವನ ನಡೆಸುವುದೇ ಮಹಾ ಪ್ರಯಾಸದ ವಿಷಯವಾಗುವುದು. ಚಿಂತೆ ಸದಾ ಕಾಡುವವು. ಬಂಧುಗಳು ಸಹಾಯ ಮಾಡುವುದಿಲ್ಲ. ಮಕ್ಕಳು ದೂರವಾಗುವರು.

ಐದನೇ ಜಾವದಲ್ಲಿ – ಮರಣ ಫಲ

ಬೇಕಾದವರು ಅಗಲಿ ಹೋಗುವರು. ರೋಗದಿಂದ ನರಳುತ್ತಿರುವವರು ಪ್ರಾಣ ತ್ಯಜಿಸುವರು. ದುಃಖದ ಜೀವನ ನಡೆಸಬೇಕಾಗುವುದು. ಕೈ ಹಾಕಿದ ಕೆಲಸಗಳೆಲ್ಲಾ ಹಾಳಾಗಿ ಹೋಗುವವು. ಇದ್ದದ್ದನ್ನು ಕಳೆದುಕೊಂಡು ಕೈ ಬರಿದು ಮಾಡಿಕೊಳ್ಳುವ ಪ್ರಸಂಗಗಳು ಬರುವವು. ಆಸ್ತಿ-ಪಾಸ್ತಿಗಳನ್ನು

ಕಳೆದುಕೊಳ್ಳಬೇಕಾಗುವುದು. ಪ್ರಿಯ ಜನರು ವೈರಿಗಳಾಗುವರು. ಹೆಣ್ಣು ಮಕ್ಕಳು ನಿಂದಿಸುವರು. ವ್ಯಾಪಾರದಲ್ಲಿ ವಿಪರೀತ ನಷ್ಟ ಉಂಟಾಗುವುದು.

## ಕೃಷ್ಣಪಕ್ಷ ಕೌಶಿಕ ಪಕ್ಷಿಯ ಪಂಚಾವಸ್ಥೆಯ ಫಲಗಳು

ಮೊದಲನೇ ಜಾವದಲ್ಲಿ – ಭೋಜನ ಫಲ

ಎಲ್ಲಾ ಕಾರ್ಯಗಳಲ್ಲೂ ಜಯ ದೊರೆತು ವಿಶೇಷ ಲಾಭ ಉಂಟಾಗು ವುದು. ಎಲ್ಲರೂ ಮಿತ್ರರಾಗುವರು. ಹೇರಳವಾಗಿ ಮಳೆ ಬೀಳುವುದು. ಧಾನ್ಯಗಳು ವೃದ್ಧಿಯಾಗುವವು. ಎಲ್ಲಿಗೂ ಪ್ರಯಾಣ ಮಾಡಬೇಕಾದ ಅವಶ್ಯಕತೆ ಇರುವುದಿಲ್ಲ. ಬೆಲೆಗಳು ದುಬಾರಿಯಾಗುವುದು. ಕೋರ್ಟು– ಕಛೇರಿ ವ್ಯವಹಾರಗಳಲ್ಲಿ ಜಯ ದೊರಕುವುದು. ರೋಗದ ಭಯವಿರುವುದಿಲ್ಲ. ಮನಸ್ಸಿಗೆ ಸದಾ ನೆಮ್ಮದಿ ಇರುವುದು. ವಿಶೇಷವಾಗಿ ಹಣ ಸಂಪಾದನೆ ಯಾಗುವುದು.

ಎರಡನೇ ಜಾವದಲ್ಲಿ – ಗಮನ ಫಲ

ಕ್ರೀಡೆಗಳಲ್ಲಿ ಜಯ ಸುಲಭವಾಗಿ ದೊರಕುವುದು. ರೋಗಗಳು ನಿವಾರಣೆಯಾಗುವವು. ಕಳ್ಳಕಾಕರ ಭಯವಿರುವುದಿಲ್ಲ. ಎಲ್ಲಾ ಕೆಲಸ ಗಳಲ್ಲಿಯೂ ಸಫಲತೆ ದೊರಕುವುದು. ಸಕಾಲಕ್ಕೆ ಮಳೆ ಬಿದ್ದು ಬೆಳೆ ಅಧಿಕ ವಾಗಿ ಬೆಳೆಯುವುದು. ಎಲ್ಲಾ ರೀತಿಯಲ್ಲಿಯೂ ಶುಭವೇ ಉಂಟಾಗುವುದು. ವಿದೇಶಕ್ಕೆ ಹೋದವರು, ಹೇಳದೆ ಮನೆ ಬಿಟ್ಟು ಹೋದವರು ಇದ್ದಕ್ಕಿದ್ದಂತೆ ವಾಪಸ್ಸಾಗುವರು. ಒಳ್ಳೆಯ ಫಲವು ಪ್ರಾಪ್ತವಾಗುವದು.

ಮೂರನೇ ಜಾವದಲ್ಲಿ – ರಾಜ್ಯ ಫಲ

ಕೈ ಹಿಡಿದ ಕಾರ್ಯಗಳು ಯಶಸ್ವಿಯಾಗುವವು. ಪ್ರಯಾಣದಿಂದ ಹೇರಳವಾಗಿ ಲಾಭ ದೊರಕುವದು. ಮಳೆ ಅಷ್ಟೇನೂ ಹೆಚ್ಚಾಗಿ ಬೀಳದಿದ್ದರೂ ಸಹ ಬೆಳೆಗೆ ಹಾನಿಯಾಗುವುದಿಲ್ಲ. ಕೋರ್ಟು ಕಛೇರಿಯ ವ್ಯವಹಾರದಲ್ಲಿ ಜಯ ದೊರಕುವುದು. ದಾಂಪತ್ಯ ಜೀವನ ಸಮರಸವಾಗಿರುವುದು. ವ್ಯಾಪಾರ ದಲ್ಲಿ ಮಧ್ಯಮ ರೀತಿಯ ಲಾಭ ಉಂಟಾಗುವುದು. ಮಕ್ಕಳ ವಿದ್ಯಾಭ್ಯಾಸ ಸಾಂಗವಾಗಿ ಸಾಗುವುದು.

ನಾಲ್ಕನೇ ಜಾವದಲ್ಲಿ – ನಿದ್ರೆಯ ಫಲ

ಈಗ ಪೀಡಿಸುತ್ತಿರುವ ರೋಗದ ಜೊತೆಗೆ ಹೊಸ ರೋಗಗಳೂ ಸಹ ಸೇರಿಕೊಳ್ಳುವವು. ಮಳೆ ಬೀಳದೆ ಕುಡಿಯುವ ನೀರಿಗೇ ಪರದಾಡಬೇಕಾದ ಪರಿಸ್ಥಿತಿ ಉಂಟಾಗುವುದು. ಯಾವ ಕಾರ್ಯಕ್ಕೆ ಕೈ ಹಾಕಿದರೂ ಸಹ ಯಶಸ್ಸು ದೊರಕುವುದಿಲ್ಲ. ಮನೋರೋಗ ಅಧಿಕವಾಗುವುದು. ಕಷ್ಟವು ಹೆಚ್ಚಾಗುವುದು. ದಿನನಿತ್ಯ ಮನೆಯಲ್ಲಿ ಸಣ್ಣ ಸಣ್ಣ ವಿಷಯಕ್ಕೂ ಸಹ ದೊಡ್ಡ ಜಗಳಗಳಾಗುವವು. ಮಕ್ಕಳು ಹಾದಿ ತಪ್ಪುವರು. ಹಣವನ್ನು ಕಳೆದುಕೊಳ್ಳಬೇಕಾಗುವುದು. ಬಂಧುಗಳು ಕೋರ್ಟಿನ ಮೆಟ್ಟಿಲು ಹತ್ತಿಸುವರು. ದುಷ್ಟರ ಸಹವಾಸದಿಂದ ಮರ್ಯಾದೆ ಕಳೆದುಕೊಳ್ಳಬೇಕಾಗುವುದು.

ಐದನೇ ಜಾವದಲ್ಲಿ – ಮರಣ ಫಲ

ವಿದ್ಯಾಭ್ಯಾಸ ನಿಂತು ಹೋಗುವುದು. ವ್ಯಾಪಾರದಲ್ಲಿ ನಷ್ಟ ಉಂಟಾಗಿ ದರಿದ್ರತೆ ಆವರಿಸುವುದು. ಶುಭ ಕಾರ್ಯಗಳು ನಡೆಯುವುದೇ ಇಲ್ಲ. ಮಳೆ ಇಲ್ಲದೆ ಧಾನ್ಯಗಳ ಬೆಳೆ ನಾಶವಾಗುವುದು. ಅಂಟು ರೋಗಗಳು ಹರಡಿಕೊಳ್ಳುವವು. ಕಛೇರಿಯಲ್ಲಿನ ಕೆಲಸದಲ್ಲಿ ತೊಡಕು ಉಂಟಾಗುವುದು. ತಂದೆ-ತಾಯಿಗಳು ದೂರವಾಗುವರು. ಮನೆಯಲ್ಲಿ ದರಿದ್ರ ಲಕ್ಷ್ಮಿ ತಾಂಡವಾಡುವಳು. ಮಿತ್ರರು ಶತ್ರುಗಳಾಗುವರು. ವ್ಯಾಧಿ ಪೀಡಿತರು ಮರಣವನ್ನಪ್ಪುವರು.

## ಶುಕ್ಲ ಪಕ್ಷದಲ್ಲಿನ ಏಳು ದಿನಗಳಲ್ಲಿ ಕೌಶಿಕ ಪಕ್ಷಿ ಸ್ಥಿತಿಗಳು

ಶುಕ್ಲ ಪಕ್ಷ ಭಾನುವಾರ – ಮಂಗಳವಾರ ಹಗಲು ಚಕ್ರ

ವಾಕ್ಯ – ಹರಿಸುಕೇತೋ
ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ಭೋಜನ ಫಲ

ಶುಕ್ಲ ಪಕ್ಷ ಭಾನುವಾರ, ಮಂಗಳವಾರ ರಾತ್ರಿ ಚಕ್ರ

ವಾಕ್ಯ – ರುಚಿರ ಭೋಧ್ಯೈಃ

ಮೊದಲನೇ ಜಾವ – ರಾಜ್ಯಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ನಿದ್ರೆಯ ಫಲ
ಐದನೇ ಜಾವ – ಭೋಜನ ಫಲ

ಶುಕ್ಲ ಪಕ್ಷ ಸೋಮವಾರ, ಬುಧವಾರ ಹಗಲು ಚಕ್ರ

ವಾಕ್ಯ – ವಿಷ್ಣು ದೇವೋಹು

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ಮರಣ ಫಲ

ಶುಕ್ಲ ಪಕ್ಷ ಸೋಮವಾರ, ಬುಧವಾರ ರಾತ್ರಿ ಚಕ್ರ

ವಾಕ್ಯ – ಧೇನು ವಿಕ್ರಯೌ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ರಾಜ್ಯ ಫಲ

ಶುಕ್ಲ ಪಕ್ಷ ಗುರುವಾರ ಹಗಲು ಚಕ್ರ

ವಾಕ್ಯ – ಉಪೇಂದ್ರೋಹರಿಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ಭೋಜನ ಫಲ

ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ನಿದ್ರೆ ಫಲ

ಶುಕ್ಲ ಪಕ್ಷ ಗುರುವಾರ ರಾತ್ರಿ ಚಕ್ರ

ವಾಕ್ಯ – ಭೋಧೇನುವಿಪ್ರಾಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಮರಣ ಫಲ

ಶುಕ್ಲ ಪಕ್ಷ ಶುಕ್ರವಾರ ಹಗಲು ಚಕ್ರ

ವಾಕ್ಯ – ಏಕೋವಾವಿಭುಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ರಾಜ್ಯ ಫಲ

ಶುಕ್ಲ ಪಕ್ಷ ಶುಕ್ರವಾರ ರಾತ್ರಿ ಚಕ್ರ

ವಾಕ್ಯ – ನಯೋ ಶೇಮುಷಿ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ಗಮನ ಫಲ

ಶುಕ್ಲ ಪಕ್ಷ ಶನಿವಾರ ಹಗಲು ಚಕ್ರ

ವಾಕ್ಯ – ಓಶಧಿಗುಣ್ಯೈಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ಗಮನ ಫಲ

ಶುಕ್ಲ ಪಕ್ಷ ಶನಿವಾರ ರಾತ್ರಿ ಚಕ್ರ

ವಾಕ್ಯ – ವಿವಾರೋಧೇನುಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ನಿದ್ರೆ ಫಲ

**ಕೃಷ್ಣಪಕ್ಷ ಭಾನುವಾರ-ಮಂಗಳವಾರ ಹಗಲು ಚಕ್ರ**

ವಾಕ್ಯ – ದೇವಗುರೋಧೀಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ಭೋಜನ ಫಲ

ಕೃಷ್ಣಪಕ್ಷ ಭಾನುವಾರ, ಮಂಗಳವಾರ ರಾತ್ರಿ ಚಕ್ರ

ವಾಕ್ಯ – ಹರೇಗುರೋಕ್ತುಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಭೋಜನ ಫಲ

ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ಮರಣ ಫಲ

ಕೃಷ್ಣಪಕ್ಷ ಸೋಮವಾರ, ಶನಿವಾರ ಹಗಲು ಚಕ್ರ

ವಾಕ್ಯ – ಜ್ಯೋತ್ಸ್ನಕೇವಾಸುಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ರಾಜ್ಯ ಫಲ

ಕೃಷ್ಣಪಕ್ಷ ಸೋಮವಾರ, ಶನಿವಾರ ರಾತ್ರಿ ಚಕ್ರ

ವಾಕ್ಯ – ದೇಶಿಕೋಸರಾಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ನಿದ್ರೆ ಫಲ

ಕೃಷ್ಣಪಕ್ಷ ಬುಧವಾರ ಹಗಲು ಚಕ್ರ

ವಾಕ್ಯ – ಗುರೋವಿಧೇಯಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ನಿದ್ರೆ ಫಲ

ಕೃಷ್ಣಪಕ್ಷ ಬುಧವಾರ ರಾತ್ರಿ ಚಕ್ರ
ವಾಕ್ಯ – ವಿಷ್ಣೋರ್ಮುರಾರೇಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ರಾಜ್ಯ ಫಲ

ಕೃಷ್ಣಪಕ್ಷ ಗುರುವಾರ ಹಗಲು ಚಕ್ರ
ವಾಕ್ಯ – ವಿಶೇಷಗುಣೋಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಗಮನ ಫಲ

ಕೃಷ್ಣಪಕ್ಷ ಗುರುವಾರ ರಾತ್ರಿ ಚಕ್ರ
ವಾಕ್ಯ – ಸುಜನೈರ್ವಿಭೋಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಭೋಜನ ಫಲ

ಕೃಷ್ಣಪಕ್ಷ ಶುಕ್ರವಾರ ಹಗಲು ಚಕ್ರ
ವಾಕ್ಯ – ಸುಗುಣೋನ್ನಿಶೇಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ –ರಾಜ್ಯ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ಮರಣ ಫಲ

ಕೃಷ್ಣಪಕ್ಷ ಶುಕ್ರವಾರ ರಾತ್ರಿ ಚಕ್ರ
ವಾಕ್ಯ – ಸೋಮುಖವೈರಿಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ಗಮನ ಫಲ

ಶುಕ್ಲ ಪಕ್ಷ ಹಗಲು ಏಳು ವಾರಗಳ ಕೌಶಿಕ ಪಕ್ಷಿ ಸ್ಥಿತಿ ನಿರೂಪಣಾ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ | ಭೋಜನ ಫಲ |
| ಸೋಮವಾರ ಬುಧವಾರ | ಭೋಜನ ಫಲ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ |
| ಗುರುವಾರ | ಮರಣ ಫಲ | ಭೋಜನ ಫಲ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ |
| ಶುಕ್ರವಾರ | ನಿದ್ರೆ ಫಲ | ಮರಣ ಫಲ | ಭೋಜನ ಫಲ | ಗಮನ ಫಲ | ರಾಜ್ಯ ಫಲ |
| ಶನಿವಾರ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ | ಭೋಜನ ಫಲ | ಗಮನ ಫಲ |

**ಶುಕ್ಲ ಪಕ್ಷ ರಾತ್ರಿ ಏಳು ವಾರಗಳ ಕೌಶಿಕ ಪಕ್ಷಿ ಸ್ಥಿತಿ ನಿರೂಪಣಾ ಏಕಚಕ್ರ**

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ರಾಜ್ಯ ಫಲ | ಮರಣ ಫಲ | ಗಮನ ಫಲ | ನಿದ್ರೆ ಫಲ | ಭೋಜನ ಫಲ |
| ಸೋಮವಾರ ಬುಧವಾರ | ಮರಣ ಫಲ | ಗಮನ ಫಲ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ |
| ಗುರುವಾರ | ಗಮನ ಫಲ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ | ಮರಣ ಫಲ |
| ಶುಕ್ರವಾರ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ | ಮರಣ ಫಲ | ಗಮನ ಫಲ |
| ಶನಿವಾರ | ಭೋಜನ ಫಲ | ರಾಜ್ಯ ಫಲ | ಮರಣ ಫಲ | ಗಮನ ಫಲ | ನಿದ್ರೆ ಫಲ |

ಕೃಷ್ಣಪಕ್ಷ ಹಗಲು ಏಳು ವಾರಗಳ ಕೌಶಿಕ ಪಕ್ಷಿ ಸ್ಥಿತಿ ನಿರೂಪಣ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ | ಭೋಜನ ಫಲ |
| ಸೋಮವಾರ ಶನಿವಾರ | ಗಮನ ಫಲ | ಭೋಜನ ಫಲ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ |
| ಬುಧವಾರ | ರಾಜ್ಯ ಫಲ | ಗಮನ ಫಲ | ಭೋಜನ ಫಲ | ಮರಣ ಫಲ | ನಿದ್ರೆ ಫಲ |
| ಗುರುವಾರ | ಭೋಜನ ಫಲ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ |
| ಶುಕ್ರವಾರ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ | ಭೋಜನ ಫಲ | ಮರಣ ಫಲ |

ಕೃಷ್ಣಪಕ್ಷ ರಾತ್ರಿ ಏಳು ವಾರಗಳ ಕೌಶಿಕ ಪಕ್ಷಿ ಸ್ಥಿತಿ ನಿರೂಪಣ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ | ಗಮನ ಫಲ | ಮರಣ ಫಲ |
| ಸೋಮವಾರ ಶನಿವಾರ | ಗಮನ ಫಲ | ಮರಣ ಫಲ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ |
| ಬುಧವಾರ | ಭೋಜನ ಫಲ | ನಿದ್ರೆ ಫಲ | ಗಮನ ಫಲ | ಮರಣ ಫಲ | ರಾಜ್ಯ ಫಲ. |
| ಗುರುವಾರ | ನಿದ್ರೆ ಫಲ | ಗಮನ ಫಲ | ಮರಣ ಫಲ | ರಾಜ್ಯ ಫಲ | ಭೋಜನ ಫಲ |
| ಶುಕ್ರವಾರ | ಮರಣ ಫಲ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ | ಗಮನ ಫಲ |

ಕೌಶಿಕ ಪಕ್ಷಿಗೆ ಕೆಲವು ದಿನಗಳಲ್ಲಿ ಪ್ರಾಣವು ಇರುವುದಿಲ್ಲ. ಅಂತಹ ದಿವಸಗಳಲ್ಲಿ ಕೌಶಿಕ ಪಕ್ಷಿಯು ಮೇಲಾದ ಸ್ಥಿತಿಯನ್ನು ಹೊಂದಿದ್ದರೂ ಸಹ ನಿಷ್ಫಲವೆಂದು ತಿಳಿದುಕೊಳ್ಳಬಹುದು.

## ನಿರ್ಜೀವ ಕೌಶಿಕ ಪಕ್ಷಿ ಚಕ್ರ

ಶುಕ್ಲ ಪಕ್ಷದಲ್ಲಿ—ಭಾನುವಾರ, ಶುಕ್ರವಾರ
ಕೃಷ್ಣ ಪಕ್ಷದಲ್ಲಿ—ಯಾವ ದಿನವೂ ನಿರ್ಜೀವವಿಲ್ಲಾ

ಮೇಲೆ ತಿಳಿಸಿರುವ ಶುಕ್ಲ–ಕೃಷ್ಣ ಪಕ್ಷಗಳಲ್ಲಿನ ಆ ದಿನಗಳಲ್ಲಿ ಕೌಶಿಕ ಪಕ್ಷಿ ನಿರ್ಜೀವವಾಗಿರುವುದರಿಂದ ಕೌಶಿಕ ಪಕ್ಷಿ ಭೋಜನ, ರಾಜ್ಯಸ್ಥಿತಿಯನ್ನು ಹೊಂದಿದ್ದರೂ ಉಪಯೋಗವಿಲ್ಲ ಹಾಗೂ ಆ ದಿನಗಳಲ್ಲಿ ಕೌಶಿಕ ಪಕ್ಷಿ ನಿದ್ರೆ, ಮರಣ ಸ್ಥಿತಿಯಲ್ಲಿದ್ದರೆ ಯಾವ ಕಾರ್ಯವೂ ಸಹ ಯಾವ ಮಹನೀಯರಿಗೂ ಸಫಲವಾಗುವುದಿಲ್ಲವೆಂಬುದನ್ನು ತಿಳಿದುಕೊಳ್ಳಬೇಕು.

ಪ್ರಶ್ನೆಗೆ ಅನುಗುಣವಾಗಿ ಶುಕ್ಲ–ಕೃಷ್ಣ ಪಕ್ಷಗಳ ಅಂಗಪಕ್ಷಿ ಕ್ರಮ

ಅಕಾರ ಶಬ್ದವು ನಾಮದ (ಹೆಸರಿನ) ಮೊದಲಲ್ಲಿದ್ದ ವರಿಗೆ
ಶಿರಸ್ಸು (ತಲೆ) – ಕೌಶಿಕವಾಗಿರುತ್ತದೆ
ಉದಾಹರಣೆ – ಶ್ಯಾಮ (ಅಕಾರ)

ಇಕಾರ ಶಬ್ದವು ಹೆಸರಿನ ಮೊದಲಲ್ಲಿದ್ದ ವರಿಗೆ
ಕಾಲು – ಕೌಶಿಕವಾಗಿರುತ್ತದೆ
ಉದಾಹರಣೆ – ಗೀತ (ಇಕಾರ)

ಉಕಾರ ಶಬ್ದವು ಹೆಸರಿನ ಮೊದಲಲ್ಲಿದ್ದ ವರಿಗೆ
ದೇಹದ ಎರಡು ಕಡೆ (ಎದೆ ಬೆನ್ನು) – ಕೌಶಿಕವಾಗಿರುತ್ತದೆ
ಉದಾಹರಣೆ – ಪುಟ್ಟ (ಉಕಾರ)

ಎಕಾರ ಶಬ್ದವು ಹೆಸರಿನ ಮೊದಲಲ್ಲಿದ್ದ ವರಿಗೆ
ದೇಹವು – ಕೌಶಿಕವಾಗಿರುತ್ತದೆ
ಉದಾಹರಣೆ – ಚೆನ್ನಕೇಶವ (ಎಕಾರ)

ಒಕಾರ ಶಬ್ದವು ಹೆಸರಿನ ಮೊದಲಲ್ಲಿದ್ದವರಿಗೆ
ಕೈಗಳು – ಕೌಶಿಕವಾಗಿರುತ್ತದೆ.
ಉದಾಹರಣೆ – ದೊಡ್ಡಯ್ಯ (ಒಕಾರ)

ಪ್ರಶ್ನೆಗಳಿಗೆ ಉತ್ತರ ಕೊಡುವವರು ತಿಳಿಯಬೇಕಾದ ಮುಖ್ಯ ವಿಷಯಗಳು :

ಪ್ರಶ್ನೆ ಕೇಳುವವರಿಗೆ ಉತ್ತರ ಹೇಳುವವರು ಪ್ರಶ್ನೆ ಕೇಳಿದವರ ಪಕ್ಷಿ ಯಾವ ವಾರದಲ್ಲಿ, ಯಾವ ಕಾಲದಲ್ಲಿ, ಯಾವ ದಿಕ್ಕಿನಲ್ಲಿ, ಯಾವ ಸ್ಥಿತಿಯಲ್ಲಿ ರುವುದೆಂಬುದನ್ನು ತಿಳಿದುಕೊಂಡು ಹಾಗೂ ಯಾರ ವಿಷಯದಲ್ಲಿ ಕೇಳುವರೋ ಅಂಥವರ ಪಕ್ಷಿಯನ್ನೂ ಸಹ ತಿಳಿದುಕೊಂಡು ಆ ಸಮಯದಲ್ಲಿರುವ ಫಲವನ್ನು ಹೇಳಬೇಕು.

ಕೌಶಿಕ ಪಕ್ಷಿ ಸ್ಥಿತಿ ಆರು ಘಳಿಗೆಗಳಾಗಿದ್ದರೂ ಸಹ ಪ್ರತಿ ಸ್ಥಿತಿಯಲ್ಲಿಯೂ ಅದು ಅಂತರವಾಗಿ ಸಂಚಾರ ಮಾಡುತ್ತದೆ.

## ಶುಕ್ಲ ಪಕ್ಷ ಹಗಲು – ರಾತ್ರಿ ಕೌಶಿಕ ಪಕ್ಷಿ ಸ್ಥಿತಿ ಅಂತರ್ಭಾಗ ಕಾಲ ಘಳಿಗೆ ವಿವರಣೆ

ಶುಕ್ಲ ಪಕ್ಷ ಹಗಲಿನಲ್ಲಿ

ಭೋಜನ ಕಾಲ – ೧।। ($1\frac{1}{2}$) ಘಳಿಗೆ
ಗಮನ ಕಾಲ – ೧।। ($1\frac{1}{2}$) ಘಳಿಗೆ
ರಾಜ್ಯ ಕಾಲ – ೨ (2) ಘಳಿಗೆ
ನಿದ್ರಾ ಕಾಲ – ।।। ($\frac{3}{4}$) ಘಳಿಗೆ
ಮರಣ ಕಾಲ – । ($\frac{1}{4}$) ಘಳಿಗೆ
ಅಂತು – ೬ (6) ಘಳಿಗೆ

ಶುಕ್ಲ ಪಕ್ಷ ರಾತ್ರಿಯಲ್ಲಿ

ಭೋಜನ ಕಾಲ – ೧। ($1\frac{1}{4}$) ಘಳಿಗೆ
ಗಮನ ಕಾಲ – ೧। ($1\frac{1}{4}$) ಘಳಿಗೆ
ರಾಜ್ಯ ಕಾಲ – ೧ (1) ಘಳಿಗೆ

ನಿದ್ರಾ ಕಾಲ – ೧ (1) ಘಳಿಗೆ
ಮರಣ ಕಾಲ – ೧।। ($1\frac{1}{2}$) ಘಳಿಗೆ
ಅಂಶು – ೬ (6) ಘಳಿಗೆ

### ಕೃಷ್ಣ ಪಕ್ಷ ಹಗಲು – ರಾತ್ರಿ ಕೌಶಿಕ ಪಕ್ಷಿ ಸ್ಥಿತಿ ಅಂತರ್ಭಾಗ ಕಾಲು ಘಳಿಗೆ ವಿವರಣೆ

#### ಕೃಷ್ಣ ಪಕ್ಷ ಹಗಲಿನಲ್ಲಿ

ಭೋಜನ ಕಾಲ – ೨ (2) ಘಳಿಗೆ
ಗಮನ ಕಾಲ – ೧।। ($1\frac{1}{2}$) ಘಳಿಗೆ
ರಾಜ್ಯ ಕಾಲ – ।।। ($\frac{3}{4}$) ಘಳಿಗೆ
ನಿದ್ರಾ ಕಾಲ – ।। ($\frac{1}{2}$) ಘಳಿಗೆ
ಮರಣ ಕಾಲ – ೧। ($1\frac{1}{4}$) ಘಳಿಗೆ
ಅಂಶು – ೬ (6) ಘಳಿಗೆ

#### ಕೃಷ್ಣ ಪಕ್ಷ ರಾತ್ರಿಯಲ್ಲಿ

ಭೋಜನ ಕಾಲ – ೧।।। ($1\frac{3}{4}$) ಘಳಿಗೆ
ಗಮನ ಕಾಲ – ೧।। ($1\frac{1}{2}$) ಘಳಿಗೆ
ರಾಜ್ಯ ಕಾಲ – ।।। ($\frac{3}{4}$) ಘಳಿಗೆ
ನಿದ್ರಾ ಕಾಲ – ।।। ($\frac{3}{4}$) ಘಳಿಗೆ
ಮರಣ ಕಾಲ – ೧। ($1\frac{1}{4}$) ಘಳಿಗೆ
ಅಂಶು – ೬ (6) ಘಳಿಗೆ

ಶುಕ್ಲ ಪಕ್ಷ ಭಾನುವಾರ, ಮಂಗಳವಾರಗಳಲ್ಲಿ ಕೌಶಿಕ ಪಕ್ಷಿ ಒಂದೇ ರೀತಿಯಲ್ಲಿ ಸಂಚಾರ ಮಾಡುವುದರಿಂದ ಕೆಲವು ಚಕ್ರಗಳನ್ನು ಎರಡು ವಾರಕ್ಕೂ ಒಟ್ಟಾಗಿಯೇ ಬರೆಯಲಾಗಿದೆ.

ಭಾನುವಾರ, ಮಂಗಳವಾರಗಳಲ್ಲಿ ಮೊದಲನೇ ಜಾವ ಆರು ಘಳಿಗೆಯೊಳಗೆ

ಕೌಶಿಕಕ್ಕೆ – ೧। (1¼) ಘಳಿಗೆ ಗಮನ ಕಾಲ

ಎರಡನೇ ಜಾವ ಆರು ಘಳಿಗೆಯೊಳಗೆ

ಕೌಶಿಕಕ್ಕೆ – ೨ (2) ಘಳಿಗೆ ರಾಜ್ಯ ಕಾಲ

ಇದೇ ರೀತಿ ಉಳಿದವೆಲ್ಲವನ್ನೂ ಆ ವಾರ ಚಕ್ರಗಳನ್ನು ನೋಡಿ ಸುಲಭವಾಗಿ ತಿಳಿದುಕೊಳ್ಳಬಹುದು.

ಅಂತರ್ಭಾಗ ರೀತಿ ಶುಕ್ಲ – ಕೃಷ್ಣ ಪಕ್ಷ ಅಕ್ಷರಗಳು

ಶುಕ್ಲ ಪಕ್ಷದಲ್ಲಿ—ಇಕಾರ – ಕೌಶಿಕ

ಕೃಷ್ಣ ಪಕ್ಷದಲ್ಲಿ—ಉಕಾರ – ಕೌಶಿಕ

ಇದೇ ರೀತಿ ಅಂತರ್ಭಾಗ ಪಕ್ಷಿ ಶಾಸ್ತ್ರದ ಕರ್ತರಾದ ರೋಮಕ ಮಹರ್ಷಿ ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಕಲವರು ಶುಕ್ಲ ಪಕ್ಷ ಅಕ್ಷರಗಳನ್ನೇ ಕೃಷ್ಣ ಪಕ್ಷಕ್ಕೂ ಉಪಯೋಗಿಸುತ್ತಾರೆ. ಹಾಗಿದ್ದರೂ ಸಹ ಅಂತರ್ಭಾಗಕ್ಕೆ ಮಾತ್ರ ಎರಡು ಪಕ್ಷಗಳಿಗೂ ಬೇರೆ ಬೇರೆ ಅಕ್ಷರಗಳನ್ನು ಉಪಯೋಗಿಸಬಹುದು.

---

# ವಾಯಸ (ಕಾಗೆ) ಪ್ರಶ್ನ ಶಾಸ್ತ್ರ

**ಕಾಗೆಗೆ ವಾಕ್ಯ ಪ್ರಥಮಾಕ್ಷರಗಳು :**

ಉ, ಕು, ಚು, ಟು, ತು, ಪು, ಷು, ಯು, ರು, ವು, ಊ, ಕೂ, ಚೂ, ಟೂ, ತೂ, ಪೂ, ಮೂ, ಯೂ, ರೂ, ವೂ.

ಜನ್ಮ ನಕ್ಷತ್ರದಿಂದ, ನಾಮ ನಕ್ಷತ್ರದಿಂದ, ನಾಮಾದ್ಯಕ್ಷರದ ಮೇಲಿರುವ ಸ್ವರದಿಂದ ಅವರವರ ಪಕ್ಷಿಗಳನ್ನು ತಿಳಿದುಕೊಳ್ಳುವ ವಿವರ :

**ಕಾಗೆ ಶುಕ್ಲ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :**

ಉತ್ತರ, ಹಸ್ತ, ಚಿತ್ತ, ಸ್ವಾತಿ, ವಿಶಾಖ,

**ಕೃಷ್ಣ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :**

ಉತ್ತರ, ಹಸ್ತ, ಚಿತ್ತ, ಸ್ವಾತಿ, ವಿಶಾಖ.

**ಶುಕ್ಲ ಪಕ್ಷ ತಿಥಿ :**

ಶುದ್ಧ ತದಿಗೆ, ಶುದ್ಧ ಅಷ್ಟಮಿ, ಶುದ್ಧ ತ್ರಯೋದಶಿ.

**ಶುಕ್ಲ ಪಕ್ಷ ರಾಶಿ :**

ಧನಸ್ಸು, ಮೀನಾ.

**ಕೃಷ್ಣ ಪಕ್ಷ ತಿಥಿ :**

ಬಹುಳ ತದಿಗೆ, ಬಹುಳ ಅಷ್ಟಮಿ, ಬಹುಳ ತ್ರಯೋದಶಿ.

**ಕೃಷ್ಣ ಪಕ್ಷ ರಾಶಿ :**

ಸಿಂಹ, ಕನ್ಯಾ, ಮಕರ.

ಆರೂಢಕ್ಕೆ ಉಪಯೋಗವಾದ ಶುಕ್ಲ ಪಕ್ಷ ವಾಯುಸ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಕೆಂಪು | ಕ್ಷತ್ರಿಯು | ಪೃಥ್ವಿ | ಪಶ್ಚಿಮ | ಗಿಡಗ, ನವಿಲು, | ಗೂಬೆ, ಕೋಳಿ |

ಆರೂಢಕ್ಕೆ ಉಪಯೋಗವಾದ ಕೃಷ್ಣ ಪಕ್ಷ ವಾಯುಸ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಹಸಿರು | ವೈಶ್ಯ | ತೇಜಸು | ದಕ್ಷಿಣ | ನವಿಲು, ಕೋಳಿ | ಗೂಬೆ, ಗಿಡಗ |

ಆರೂಢಕ್ಕೆ ಉಪಯೋಗವಾದ ಶುಕ್ಲ-ಕೃಷ್ಣ ಪಕ್ಷಗಳ ವಾಯುಸ ಪಕ್ಷಿ ಚಕ್ರ

| ಅಕ್ಷರಗಳು | ಜಾತಿ | ಗ್ರಹ | ದೇವತೆ | ಆಕಾರ | ಧಾತುಮೂಲ ಜೀವ |
|---|---|---|---|---|---|
| ಉ | ಪುರುಷ | ಕುಜ | ವಿಷ್ಣು | ಷಟ್ಕೋನ | ಧಾತು |

| ಪಾದ | ರುಚಿ | ವೃಕ್ಷ | ಲೋಹ | ಕಾಲ | ಗಮನಾಗಮನ |
|---|---|---|---|---|---|
| ಬಹು ಪಾದ | ಒಗರು | ಮತ್ತೀ ಗಿಡ | ತಾಮ್ರ | ಭವಿಷ್ಯತ್ಕಾಲ | ಬರುತ್ತಾನು |

ವಾಯುಸ ಪಕ್ಷಿಯ ಆಕಾರ ಚಕ್ರ




ಕಾಲ ರೀತಿ ನಿರ್ದೇಶನ :

ಒಂದು ದಿನವನ್ನು 5 ಭಾಗಗಳಾಗಿ ವಿಭಜನೆ ಮಾಡಿದರೆ ಒಂದು ಭಾಗಕ್ಕೆ 6 ಘಳಿಗೆ ದೊರಕುತ್ತದೆ. ಶುಕ್ಲ ಪಕ್ಷಗಳೊಂದೊಂದಕ್ಕೂ 15 ತಿಥಿಗಳು.

7 ದಿವಸಗಳಿಗೆ 1 ವಾರ

1 ದಿವಸಕ್ಕೆ—30 ಹಗಲು ಘಳಿಗೆಗಳು 30 ರಾತ್ರಿ ಘಳಿಗೆಗಳು

6 ಘಳಿಗೆ—1 ಝಾವ

ವಾಯುಸ ಪಕ್ಷಿ ಸ್ಥಿತಿ ಶುಕ್ಲ ಪಕ್ಷದ ಹಗಲಿನಲ್ಲಿ:—

ಹರಿಸುಕೇಶೋ—ಅಂದರೆ ಗುರುವಾರದಲ್ಲಿ ಸಂಚಾರ ಮಾಡುವುದು.

ವಾಯುಸ ಪಕ್ಷಿ ಸ್ಥಿತಿ ಶುಕ್ಲ ಪಕ್ಷದ ರಾತ್ರಿಯಲ್ಲಿ:–
ಉಪೇಂದ್ರೋಹರಿಃ – ಅಂದರೆ ಭಾನುವಾರ, ಮಂಗಳವಾರಗಳಲ್ಲಿ
ಸಂಚಾರ ಮಾಡುವುದು.

ವಾಯುಸ ಪಕ್ಷಿ ಸ್ಥಿತಿ ಕೃಷ್ಣ ಪಕ್ಷದ ಹಗಲಿನಲ್ಲಿ;–
ದೇವೋರುಚಿರಃ – ಅಂದರೆ ಬುಧವಾರದಲ್ಲಿ ಸಂಚಾರ ಮಾಡುವುದು.
ವಾಯುಸ ಪಕ್ಷಿ ಸ್ಥಿತಿ ಕೃಷ್ಣ ಪಕ್ಷದ ರಾತ್ರಿಯಲ್ಲಿ;–
ಜನೇಪಿ ಗುಣೋಃ – ಅಂದ್ರೆ ಗುರುವಾರದಲ್ಲಿ ಸಂಚಾರ ಮಾಡುವುದು.

**ಶುಕ್ಲ ಪಕ್ಷದಲ್ಲಿ ವಾಯುಸ ಪಕ್ಷಿಯು ಸಂಚಾರ ಕ್ರಮದ ಶ್ಲೋಕ :**

॥ ಗುರುವಾರಂ ವಾಯುಸಂಚ ಶುಕ್ಲ ಪಕ್ಷಂಚ ಚಕ್ರಯೋಃ ॥

**ಕೃಷ್ಣ ಪಕ್ಷದಲ್ಲಿ ವಾಯುಸ ಪಕ್ಷಿಯು ಸಂಚಾರ ಕ್ರಮದ ಶ್ಲೋಕ :**

॥ ಬುಧವಾರಂ ವಾಯುಸಂಚ ಕೃಷ್ಣ ಪಕ್ಷಂಚ ಚಕ್ರಯೋಃ ॥

**ಶುಕ್ಲ ಪಕ್ಷದಲ್ಲಿ ವಾಯುಸ ಪಕ್ಷಿಯ ಸಂಚಾವಸ್ಥೆಯ ಫಲಗಳು**

ಮೊದಲನೇ ಜಾವದಲ್ಲಿ – ಭೋಜನ ಫಲ

ಈ ಫಲದಲ್ಲಿ ಎಲ್ಲಾ ರೀತಿಯ ಶುಭವೇ ಉಂಟಾಗುವುದು. ಮನೆಯಿಂದ ಜಗಳವಾಡಿಕೊಂಡು ಹೋದವರು ಹಿಂತಿರುಗಿ ಬರುವರು. ಚಿಂತೆಯು ಪೀಡಿಸುವುದಿಲ್ಲ. ಸಕಾಲಕ್ಕೆ ಹದವಾಗಿ ಮಳೆ ಬೀಳುವುದು. ಬೆಳೆಗೆ ಯಾವ ಹಾನಿಯೂ ಉಂಟಾಗದೆ ಚೆನ್ನಾಗಿ ಬೆಳೆಯಾಗುವುದು. ಹಳೆಯ ಖಾಯಿಲೆಗಳು ಸಹ ಗುಣವಾಗುವವು. ಅಚ್ಚುಕಟ್ಟಾಗಿ ಸಂಸಾರ ನಿರ್ವಹಿಸಬಲ್ಲ ಪತ್ನಿ ಸಿಕ್ಕುವಳು. ಗರ್ಭಿಣಿ ಸ್ತ್ರೀಯರು ಯಾವ ತೊಂದರೆಯಿಲ್ಲದೆ ಸುಖವಾಗಿ ಹಡೆಯುವರು. ಸಕಲ ಕಾರ್ಯಗಳಲ್ಲಿ ಜಯ ಉಂಟಾಗುವುದು. ವ್ಯಾಪಾರದಲ್ಲಿ ಹೆಚ್ಚು ಲಾಭವಾಗುವುದು. ಮದುವೆಯಾಗದ ಹೆಣ್ಣು ಮಕ್ಕಳಿಗೆ ಶೀಘ್ರವೇ ಮದುವೆಯಾಗುವುದು.

ಎರಡನೇ ಜಾವದಲ್ಲಿ – ಗಮನಫಲ

ಈ ಸಮಯದಲ್ಲಿ ಎಲ್ಲಿಗೂ ಪ್ರಯಾಣ ಬೆಳೆಸಬಾರದು. ಮಳೆ ಚೆನ್ನಾಗಿ ಆಗದೆ ಧಾನ್ಯ ವೃದ್ಧಿಯಾಗಲಾರದು. ಹೆಣ್ಣಿಗಾಗಿ ಪ್ರಯತ್ನಪಟ್ಟರೂ ದಕ್ಕುವ

ದಿಲ್ಲ. ಯಾವುದೇ ಕೆಲಸವೂ ಸಹ ಸುಸೂತ್ರವಾಗಿ ಸಾಗಲಾರದು. ವ್ಯಾಪಾರದಲ್ಲಿ ಹಣದ ಲಾಭ ಉಂಟಾಗುವುದಿಲ್ಲ. ಕೋರ್ಟು ಕಛೇರಿ ವ್ಯವಹಾರಗಳಲ್ಲಿ ಬಹಳ ಪರಿಶ್ರಮದಿಂದ ಜಯ ದೊರಕುವುದು. ಹಣವಿದ್ದರೂ ಸಹ ವೃಥಾ ಖರ್ಚು ಬರುವುದು. ಮನಸ್ಸಿಗೆ ನೆಮ್ಮದಿ ಇರುವುದಿಲ್ಲ.

ಮೂರನೇ ಜಾವದಲ್ಲಿ – ರಾಜ್ಯಫಲ

ಮೇಲಧಿಕಾರಿಗಳ ಸಹಾಯದಿಂದ ಲಾಭ ಉಂಟಾಗುವುದು. ಕರ್ಮವು ಕಳೆಯುವುದು. ಎಲ್ಲಾ ಕೆಲಸಗಳಲ್ಲಿಯೂ ಸುಲಭವಾಗಿ ಜಯ ದೊರಕುವುದು. ಬಹಳಷ್ಟು ಉಡುಗೊರೆಗಳು ಬರುವವು. ಶುಭಕಾರ್ಯಗಳು ಮನೆಯಲ್ಲಿ ಜರುಗುವವು. ಹಳೆಯ ರೋಗಗಳೂ ಸಹ ನಿವಾರಣೆಯಾಗುವವು. ನಷ್ಟವಾದ ವಸ್ತುಗಳು ದೊರಕುವವು. ವ್ಯಾಪಾರದಲ್ಲಿ ಹೆಚ್ಚು ಲಾಭ ದೊರೆಯುವುದು. ಎಲ್ಲಾ ಕಾರ್ಯಗಳೂ ಸಿದ್ಧಿಯಾಗುವವು. ಭೋಜನ ಫಲ, ರಾಜ್ಯ ಫಲ ಎರಡೂ ಸಮನಾಗಿಯೇ ಇರುವುದೆಂದು ಹಲವು ಜ್ಞಾನಿಗಳು ಅಭಿಪ್ರಾಯಪಡುತ್ತಾರೆ.

ನಾಲ್ಕನೇ ಜಾವದಲ್ಲಿ – ನಿದ್ರೆಯ ಫಲ

ಪೀಡಿಸುತ್ತಿರುವ ರೋಗಗಳು ಗುಣವಾಗುವುದೇ ಇಲ್ಲ. ಮನೆ ಬಿಟ್ಟು ಹೋದವರು ವಾಪಸ್ಸಾಗುವುದಿಲ್ಲ. ಯಾವುದೇ ಶುಭ ಕಾರ್ಯ ಆರಂಭಿಸಲು ಅನೇಕ ಅಡಚಣೆಗಳು ಉಂಟಾಗಿ ನಿಂತುಹೋಗುತ್ತವೆ. ವ್ಯಾಪಾರದಲ್ಲಿ ಹಾಕಿದ ಬಂಡವಾಳವನ್ನೇ ಕಳೆದುಕೊಳ್ಳಬೇಕಾಗುವುದು. ಮುಟ್ಟಿದ್ದೆಲ್ಲಾ ಮಣ್ಣಾಗುವುದು ಅಂದರೆ ಎಲ್ಲದರಲ್ಲಿಯೂ ಕೇವಲ ನಷ್ಟವೇ ಉಂಟಾಗುವುದು. ಕೇವಲ ಕೆಟ್ಟದ್ದೇ ಆಗುವುದು. ಮಳೆ ಬೀಳದೆ ನೀರಿಗಾಗಿ ಪರದಾಡಬೇಕಾಗುವುದು. ಬೆಳೆ ಇಲ್ಲದೆ ಪದಾರ್ಥಗಳ ಬೆಲೆ ಗಗನಕ್ಕೇರುವವು. ಸದಾ ಮನಸ್ಸಿಗೆ ಚಂಚಲಗಳುಂಟು.

ಐದನೇ ಜಾವದಲ್ಲಿ – ಮರಣ ಫಲ

ಹತ್ತಿರದ ಬಂಧು-ಮಿತ್ರರ ಮರಣ ವಾರ್ತೆಯನ್ನು ಕೇಳಬೇಕಾಗಿ ಬರುವುದು. ರೋಗಗಳು ಮತ್ತಷ್ಟು ಉಲ್ಬಣವಾಗಿ ಪ್ರಾಣ ಕೊರೆಯಬೇಕಾಗುವುದು. ಇಚ್ಛಿಸಿದ ಕಾರ್ಯಗಳು ನೆರವೇರುವುದಿಲ್ಲ. ಬೆಲೆ ಬಾಳುವ ವಸ್ತು

ಗಳು ಕಳೆದುಹೋಗುವವು. ಮನೆ, ಜಮೀನನ್ನು ಕಳೆದುಕೊಳ್ಳಬೇಕಾಗುವುದು. ರೋಗ ಮತ್ತಷ್ಟು ಹೆಚ್ಚಾಗುವುದು. ಬಂಧು ಮಿತ್ರರು, ಹೆಣ್ಣುಮಕ್ಕಳು ಜರಿಯುವರು. ಕೈ ಹಾಕಿದ ಕಾರ್ಯದಲ್ಲೆಲ್ಲಾ ನಷ್ಟವೇ ಉಂಟಾಗುವುದು. ಚಿಂತೆಯಿಂದ ಕೊರಗಬೇಕಾಗುವುದು. ನಿದ್ರಾ ಫಲ ಹಾಗೂ ಮರಣ ಫಲ ಒಂದೇ ರೀತಿಯೆಂದು ಹಲವು ಜ್ಞಾನಿಗಳು ಅಭಿಪ್ರಾಯಪಡುತ್ತಾರೆ.

## ಕೃಷ್ಣ ಪಕ್ಷ ವಾಯಸ ಪಕ್ಷಿಯ ಪಂಚಾವಸ್ಥೆಯ ಫಲಗಳು

**ಮೊದಲನೇ ಜಾವದಲ್ಲಿ – ಭೋಜನ ಫಲ**

ಯಾರೊಡನೆಯೂ ಜಗಳವಾಡಬೇಕಾದ ಪ್ರಸಂಗ ಬರುವುದಿಲ್ಲ. ವ್ಯಾಪಾರದಲ್ಲಿ ಬಹಳಷ್ಟು ಲಾಭವು ದೊರೆಯುವುದು. ರೋಗಗಳು ನಿವಾರಣೆಯಾಗುವವು. ಯಥೇಚ್ಛವಾಗಿ ಮಳೆ ಬೀಳುವುದು. ಬೆಳೆ ಚೆನ್ನಾಗಿ ಆಗುವುದು. ಬೇರೆ ಸ್ಥಳಗಳಿಗೆ ಪ್ರಯಾಣ ಮಾಡಬೇಕಾದ ಸಂದರ್ಭಗಳು ಬರುವುದಿಲ್ಲ. ಧಾನ್ಯಗಳ ಬೆಲೆ ಹಾಗೂ ಇನ್ನಿತರ ವಸ್ತುಗಳ ಬೆಲೆ ಏರುವುದು. ಮನೆಯಲ್ಲಿ ನೆಮ್ಮದಿ ಸದಾ ಇರುವುದು. ಶುಭ ಕಾರ್ಯಗಳು ನಡೆಯುವವು. ಶುಕ್ಲ ಕೃಷ್ಣ ಪಕ್ಷ ಫಲಗಳು ಒಂದೇ ರೀತಿ ಇರುವವೆಂದು ಹಲವು ಜ್ಞಾನಿಗಳು ಅಭಿಪ್ರಾಯಪಡುತ್ತಾರೆ.

**ಎರಡನೇ ಜಾವದಲ್ಲಿ – ಗಮನ ಫಲ**

ಯಾವುದೇ ರೀತಿಯ ಸ್ಪರ್ಧೆಯಲ್ಲಿ ಭಾಗವಹಿಸಿದರೂ ಸಹ ಸುಲಭವಾಗಿ ಜಯ ದೊರಕುತ್ತದೆ. ಬಹಳ ಸಮಯದಿಂದ ಪೀಡಿಸುತ್ತಿರುವ ರೋಗಗಳೂ ಸಹ ನಿವಾರಣೆಯಾಗುವವು. ಎಲ್ಲವೂ ಮಂಗಳಕರವಾಗಿ ಪರಿಣಮಿಸುವುದು. ಕಳ್ಳಕಾಕರ, ಶತ್ರುಗಳ ಭಯಃವಿರುವುದಿಲ್ಲ. ಚೆನ್ನಾಗಿ, ಸಮಯಕ್ಕೆ ಸರಿಯಾಗಿ ಮಳೆ ಬಿದ್ದು ಹೇರಳವಾಗಿ ಬೆಳೆ ಬೆಳೆಯುವುದು. ಮನೆ ಬಿಟ್ಟು ಹೋದವರು, ವಿದೇಶಕ್ಕೆ ಹೋದವರು ಹಿಂತಿರುಗಿ ಮನೆಗೆ ಬರುವರು. ಕೈ ಹಿಡಿದ ಕಾರ್ಯಗಳಲ್ಲಿ ಜಯ ಉಂಟಾಗುವುದು. ಹೇರಳವಾಗಿ ಧನಲಾಭವಾಗುವುದು.

ಮೂರನೇ ಜಾಮದಲ್ಲಿ – ರಾಜ್ಯ ಫಲ

ಆರಂಭಿಸಿದ ಕಾರ್ಯಗಳು ಅಡಚಣೆಯಿಲ್ಲದೆ ಪೂರ್ತಿಯಾಗುವವು. ಎಲ್ಲಾ ಕಾರ್ಯಗಳಲ್ಲಿಯೂ ಜಯ ಉಂಟಾಗುವುದು. ಬೇರೆ ಊರುಗಳಿಗೆ ಪ್ರಯಾಣ ಮಾಡುವುದರಿಂದ ವಿಶೇಷವಾಗಿ ಲಾಭ ಉಂಟಾಗುವುದು. ಮಳೆ ಸ್ವಲ್ಪವೇ ಬಿದ್ದರೂ ಸಹ ಬೆಳೆಗೆ ಹಾನಿ ಸಂಭವಿಸುವುದಿಲ್ಲ. ಯಾರೊಂದಿಗೂ ವೈರತ್ವ ಕಟ್ಟಿಕೊಳ್ಳುವ ಸಂದರ್ಭ ಬರುವುದಿಲ್ಲ. ಸ್ಪರ್ಧೆಯಲ್ಲಿ ಸುಲಭವಾಗಿ ಜಯ ದೊರಕುವುದು. ಕಳ್ಳಕಾಕರ ಭಯವಿರುವುದಿಲ್ಲ. ಶುಭಕಾರ್ಯಗಳು ಸುಸೂತ್ರವಾಗಿ ನಡೆಯುವವು. ಮನೆಯಲ್ಲಿ ಮನದಲ್ಲಿ ಸದಾ ನೆಮ್ಮದಿ ಇರುವುದು.

ನಾಲ್ಕನೇ ಜಾಮದಲ್ಲಿ – ನಿದ್ರೆಯ ಫಲ

ಈ ಸಮಯದಲ್ಲಿ ಬಹಳ ಕಷ್ಟ ನಷ್ಟಗಳನ್ನು ಅನುಭವಿಸಬೇಕಾಗುವುದು. ಸದಾ ಅನಿಷ್ಟಗಳೇ ಪ್ರಾಪ್ತಿಯಾಗುವವು. ಪೀಡಿಸುತ್ತಿರುವ ಹಳೆಯ ರೋಗಗಳ ಜೊತೆ ಹೊಸ ರೋಗಗಳೂ ಸಹ ಸೇರಿಕೊಳ್ಳುವವು. ಮಳೆ ಸರಿಯಾಗಿ ಆಗುವುದಿಲ್ಲ. ಆಹಾರ ಪದಾರ್ಥಗಳಿಗೆ ಹಾಹಾಕಾರ ಉಂಟಾಗುವುದು. ಮನೋವ್ಯಾಧಿ ಹೆಚ್ಚಾಗಿ ಇರುವುದು. ಕಲಹವು ಸಂಭವಿಸುವುದು. ಮನೆಯಲ್ಲಿ ಸದಾ ಕಲಹ ಉಂಟಾಗುವುದು. ಯಾವುದೇ ಕಾರ್ಯದಲ್ಲಿಯೂ ಸಹ ಜಯ ದೊರಕುವುದಿಲ್ಲ.

ಐದನೇ ಜಾಮದಲ್ಲಿ – ಮರಣ ಫಲ

ಸರ್ವನಾಶವಾಗುವುದು. ಎಲ್ಲದರಲ್ಲಿಯೂ ನಷ್ಟವೇ ಉಂಟಾಗುವುದು. ವೈರಿಗಳು ಹೆಚ್ಚಾಗುವರು. ಮಕ್ಕಳು ಮನೆ ಬಿಟ್ಟು ಹೋಗುವರು. ಶುಭ ಕಾರ್ಯಗಳೊಂದೂ ಆಗುವುದಿಲ್ಲ. ಧನ ಹಾನಿಯಾಗುವುದು. ಸಮಾಜದಲ್ಲಿ ಗೌರವ ಕಳೆದುಕೊಳ್ಳಬೇಕಾಗುವುದು. ಆಸ್ತಿ-ಪಾಸ್ತಿಗಳು ಕೈಬಿಟ್ಟು ಹೋಗುವವು. ವ್ಯಾಧಿಗ್ರಸ್ತರು ಪ್ರಾಣ ಬಿಡುವರು. ಮನೆಯಲ್ಲಿ ದರಿದ್ರ ಲಕ್ಷ್ಮಿ ತಾಂಡವವಾಡುವಳು. ಎಲ್ಲವೂ ಅಶುಭವೇ ಉಂಟಾಗುವವು.

## ಶುಕ್ಲ ಕೃಷ್ಣ ಪಕ್ಷದಲ್ಲಿ ಏಳು ದಿನಗಳಲ್ಲಿನ ವಾಯಸ ಪಕ್ಷಿ

### ಶುಕ್ಲ ಪಕ್ಷ ಭಾನುವಾರ – ಮಂಗಳವಾರ ಹಗಲು ಚಕ್ರ

ವಾಕ್ಯ – ಹಂಸುಕೇಶೋ

ಮೊದಲನೇ ಜಾವ – ರಾಜ್ಯಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ಗಮನ ಫಲ

### ಶುಕ್ಲ ಪಕ್ಷ ಭಾನುವಾರ, ಮಂಗಳವಾರ ರಾತ್ರಿ ಚಕ್ರ

ವಾಕ್ಯ – ರುಚಿರ ಭೋಧ್ಯೈಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ನಿದ್ರೆ ಫಲ

### ಶುಕ್ಲ ಪಕ್ಷ ಸೋಮವಾರ, ಬುಧವಾರ ಹಗಲು ಚಕ್ರ

ವಾಕ್ಯ – ವಿಷ್ಣು ದೇವೋಹು

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ಭೋಜನ ಫಲ

ಶುಕ್ಲ ಪಕ್ಷ ಸೋಮವಾರ, ಬುಧವಾರ ರಾತ್ರಿ ಚಕ್ರ

ವಾಕ್ಯ – ಧೇನು ವಿಕ್ರಯೌ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ನಿದ್ರೆಯು ಫಲ
ಐದನೇ ಜಾವ – ಭೋಜನ ಫಲ

ಶುಕ್ಲ ಪಕ್ಷ ಗುರುವಾರ ಹಗಲು ಚಕ್ರ

ವಾಕ್ಯ – ಉಪೇಂದ್ರೋಹರಿಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ಮರಣ ಫಲ

ಶುಕ್ಲ ಪಕ್ಷ ಗುರುವಾರ ರಾತ್ರಿ ಚಕ್ರ

ವಾಕ್ಯ – ಭೋಧೇನುವಿಪ್ರಾಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ರಾಜ್ಯ ಫಲ

ಶುಕ್ಲ ಪಕ್ಷ ಶುಕ್ರವಾರ ಹಗಲು ಚಕ್ರ

ವಾಕ್ಯ – ಏಕೋವಾವಿಭುಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ಭೋಜನ ಫಲ

ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ನಿದ್ರೆ ಫಲ

ಶುಕ್ಲ ಪಕ್ಷ ಶುಕ್ರವಾರ ರಾತ್ರಿ ಚಕ್ರ
ವಾಕ್ಯ – ನಯೋ ಶೇಮುಷಿ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಮರಣ ಫಲ

ಶುಕ್ಲ ಪಕ್ಷ ಶನಿವಾರ ಹಗಲು ಚಕ್ರ
ವಾಕ್ಯ – ಓಶಧಿಗುಣ್ಯೈಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ರಾಜ್ಯ ಫಲ

ಶುಕ್ಲ ಪಕ್ಷ ಶನಿವಾರ ರಾತ್ರಿ ಚಕ್ರ
ವಾಕ್ಯ – ವಿವಾರೋಧೇನುಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ಗಮನ ಫಲ

## ಕೃಷ್ಣಪಕ್ಷ ಭಾನುವಾರ-ಮಂಗಳವಾರ ಹಗಲು ಚಕ್ರ

ವಾಕ್ಯ – ದೇವಗುರೋಧೀಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಗಮನ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ನಿದ್ರೆ ಫಲ

## ಕೃಷ್ಣಪಕ್ಷ ಭಾನುವಾರ, ಮಂಗಳವಾರ ರಾತ್ರಿ ಚಕ್ರ

ವಾಕ್ಯ – ಹರೇಗುರೋಕ್ತುಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಭೋಜನ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ಗಮನ ಫಲ

## ಕೃಷ್ಣಪಕ್ಷ ಸೋಮವಾರ, ಶನಿವಾರ ಹಗಲು ಚಕ್ರ

ವಾಕ್ಯ – ಜ್ಯೋತಿಸ್ಸ್ಕೇವಾಸುಃ

ಮೊದಲನೇ ಜಾವ – ಮರಣ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ಭೋಜನ ಫಲ

## ಕೃಷ್ಣಪಕ್ಷ ಸೋಮವಾರ, ಶನಿವಾರ ರಾತ್ರಿ ಚಕ್ರ

ವಾಕ್ಯ – ದೇಶಿಕೋಸರಾಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ಗಮನ ಫಲ

ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಭೋಜನ ಫಲ

ಕೃಷ್ಣಪಕ್ಷ ಬುಧವಾರ ಹಗಲು ಚಕ್ರ

ವಾಕ್ಯ – ಗುರೋವಿಧೇಯಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ರಾಜ್ಯ ಫಲ
ಐದನೇ ಜಾವ – ಗಮನ ಫಲ

ಕೃಷ್ಣಪಕ್ಷ ಬುಧವಾರ ರಾತ್ರಿ ಚಕ್ರ

ವಾಕ್ಯ – ವಿಷ್ಣೋರ್ಮುರಾರೇಃ

ಮೊದಲನೇ ಜಾವ – ರಾಜ್ಯ ಫಲ
ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ನಿದ್ರೆ ಫಲ
ನಾಲ್ಕನೇ ಜಾವ – ಗಮನ ಫಲ
ಐದನೇ ಜಾವ – ಮರಣ ಫಲ

ಕೃಷ್ಣಪಕ್ಷ ಗುರುವಾರ ಹಗಲು ಚಕ್ರ

ವಾಕ್ಯ – ವಿಶೇಷಗುಣೋಃ

ಮೊದಲನೇ ಜಾವ – ನಿದ್ರೆ ಫಲ
ಎರಡನೇ ಜಾವ – ರಾಜ್ಯ ಫಲ
ಮೂರನೇ ಜಾವ – ಗಮನ ಫಲ

ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ಮರಣ ಪಲ

ಕೃಷ್ಣಪಕ್ಷ ಗುರುವಾರ ರಾತ್ರಿ ಚಕ್ರ
ವಾಕ್ಯ – ಸುಜನೈರ್ವಿಭೋಃ

ಮೊದಲನೇ ಜಾವ – ಭೋಜನ ಫಲ
ಎರಡನೇ ಜಾವ – ನಿದ್ರೆ ಫಲ
ಮೂರನೇ ಜಾವ – ಗಮನ ಫಲ
ನಾಲ್ಕನೇ ಜಾವ – ಮರಣ ಫಲ
ಐದನೇ ಜಾವ – ರಾಜ್ಯ ಫಲ

ಕೃಷ್ಣಪಕ್ಷ ಶುಕ್ರವಾರ ಹಗಲು ಚಕ್ರ
ವಾಕ್ಯ – ಸುಗುಣೋಸ್ಮಿತೇಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ಭೋಜನ ಫಲ
ಮೂರನೇ ಜಾವ – ಮರಣ ಫಲ
ನಾಲ್ಕನೇ ಜಾವ – ನಿದ್ರೆ ಫಲ
ಐದನೇ ಜಾವ – ರಾಜ್ಯ ಫಲ

ಕೃಷ್ಣಪಕ್ಷ ಶುಕ್ರವಾರ ರಾತ್ರಿ ಚಕ್ರ
ವಾಕ್ಯ – ಸೋಮುಖವೈರಿಃ

ಮೊದಲನೇ ಜಾವ – ಗಮನ ಫಲ
ಎರಡನೇ ಜಾವ – ಮರಣ ಫಲ
ಮೂರನೇ ಜಾವ – ರಾಜ್ಯ ಫಲ
ನಾಲ್ಕನೇ ಜಾವ – ಭೋಜನ ಫಲ
ಐದನೇ ಜಾವ – ನಿದ್ರೆ ಫಲ

ಶುಕ್ಲ ಪಕ್ಷ ಹಗಲು ಏಳು ವಾರಗಳ ವಾಯಸ ಪಕ್ಷಿ ಸ್ಥಿತಿ ನಿರೂಪಣ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ | ಭೋಜನ ಫಲ | ಗಮನ ಫಲ |
| ಸೋಮವಾರ ಬುಧವಾರ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ | ಭೋಜನ ಫಲ |
| ಗುರುವಾರ | ಭೋಜನ ಫಲ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ | ಮರಣ ಫಲ |
| ಶುಕ್ರವಾರ | ಮರಣ ಫಲ | ಭೋಜನ ಫಲ | ಗಮನ ಫಲ | ರಾಜ್ಯ ಫಲ | ನಿದ್ರೆ ಫಲ |
| ಶನಿವಾರ | ನಿದ್ರೆ ಫಲ | ಮರಣ ಫಲ | ಭೋಜನ ಫಲ | ಗಮನ ಫಲ | ರಾಜ್ಯ ಫಲ |

ಶುಕ್ಲ ಪಕ್ಷ ರಾತ್ರಿ ಏಳು ವಾರಗಳ ವಾಯಸ ಪಕ್ಷಿ ಸ್ಥಿತಿ ನಿರೂಪಣಾ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಭೋಜನ ಫಲ | ರಾಜ್ಯ ಫಲ | ಮರಣ ಫಲ | ಗಮನ ಫಲ | ನಿದ್ರೆ ಫಲ |
| ಸೋಮವಾರ ಬುಧವಾರ | ರಾಜ್ಯ ಫಲ | ಮರಣ ಫಲ | ಗಮನ ಫಲ | ನಿದ್ರೆ ಫಲ | ಭೋಜನ ಫಲ |
| ಗುರುವಾರ | ಮರಣ ಫಲ | ಗಮನ ಫಲ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ |
| ಶುಕ್ರವಾರ | ಗಮನ ಫಲ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ | ಮರಣ ಫಲ |
| ಶನಿವಾರ | ನಿದ್ರೆ ಫಲ | ಭೋಜನ ಫಲ | ರಾಜ್ಯ ಫಲ | ಮರಣ ಫಲ | ಗಮನ ಫಲ |

ಕೃಷ್ಣ ಪಕ್ಷ ಹಗಲು ಏಳು ವಾರಗಳ ವಾಯಸ ಪಕ್ಷಿ ಸ್ಥಿತಿ ನಿರೂಪಣಾ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ರಾಜ್ಯ ಫಲ | ಗಮನ ಫಲ | ಭೋಜನ ಫಲ | ಮರಣ ಫಲ | ನಿದ್ರೆ ಫಲ |
| ಸೋಮವಾರ ಶನಿವಾರ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ | ಭೋಜನ ಫಲ |
| ಬುಧವಾರ | ಭೋಜನ ಫಲ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ |
| ಗುರುವಾರ | ನಿದ್ರೆ ಫಲ | ರಾಜ್ಯ ಫಲ | ಗಮನ ಫಲ | ಭೋಜನ ಫಲ | ಮರಣ ಫಲ |
| ಶುಕ್ರವಾರ | ಗಮನ ಫಲ | ಭೋಜನ ಫಲ | ಮರಣ ಫಲ | ನಿದ್ರೆ ಫಲ | ರಾಜ್ಯ ಫಲ |

ಕೃಷ್ಣಪಕ್ಷ ರಾತ್ರಿ ಏಳು ವಾರಗಳ ವಾಯಸ ಪಕ್ಷಿ ಸ್ಥಿತಿ ನಿರೂಪಣ ಏಕಚಕ್ರ

| ವಾರಗಳು | 1ನೇ ಜಾವ | 2ನೇ ಜಾವ | 3ನೇ ಜಾವ | 4ನೇ ಜಾವ | 5ನೇ ಜಾವ |
|---|---|---|---|---|---|
| ಭಾನುವಾರ ಮಂಗಳವಾರ | ಮರಣ ಫಲ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ | ಗಮನ ಫಲ |
| ಸೋಮವಾರ ಶನಿವಾರ | ನಿದ್ರೆ ಫಲ | ಗಮನ ಫಲ | ಮರಣ ಫಲ | ರಾಜ್ಯ ಫಲ | ಭೋಜನ ಫಲ |
| ಬುಧವಾರ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ | ಗಮನ ಫಲ | ಮರಣ ಫಲ |
| ಗುರುವಾರ | ಭೋಜನ ಫಲ | ನಿದ್ರೆ ಫಲ | ಗಮನ ಫಲ | ಮರಣ ಫಲ | ರಾಜ್ಯ ಫಲ |
| ಶುಕ್ರವಾರ | ಗಮನ ಫಲ | ಮರಣ ಫಲ | ರಾಜ್ಯ ಫಲ | ಭೋಜನ ಫಲ | ನಿದ್ರೆ ಫಲ |

ವಾಯುಸ ಪಕ್ಷಿಗೆ ಕೆಲವು ದಿನಗಳಲ್ಲಿ ಪ್ರಾಣವು ಇರುವುದಿಲ್ಲ. ಅಂತಹ ದಿವಸಗಳಲ್ಲಿ ವಾಯುಸ ಪಕ್ಷಿಯು ಮೇಲಾದ ಸ್ಥಿತಿಯನ್ನು ಹೊಂದಿದ್ದರೂ ಸಹ ನಿಷ್ಫಲವೆಂದು ತಿಳಿದುಕೊಳ್ಳಬಹುದು.

## ನಿರ್ಜೀವ ವಾಯುಸ ಪಕ್ಷಿ ಚಕ್ರ

ಶುಕ್ಲ ಪಕ್ಷದಲ್ಲಿ—ಸೋಮವಾರ.
ಕೃಷ್ಣ ಪಕ್ಷದಲ್ಲಿ—ಭಾನುವಾರ.

ಮೇಲೆ ತಿಳಿಸಿರುವ ಶುಕ್ಲ-ಕೃಷ್ಣ ಪಕ್ಷಗಳಲ್ಲಿನ ಆ ದಿನಗಳಲ್ಲಿ ವಾಯುಸ ಪಕ್ಷಿ ನಿರ್ಜೀವವಾಗಿರುವುದರಿಂದ ವಾಯುಸ ಪಕ್ಷಿ ಭೋಜನ, ರಾಜ್ಯಸ್ಥಿತಿಯನ್ನು ಹೊಂದಿದ್ದರೂ ಉಪಯೋಗವಿಲ್ಲ ಹಾಗೂ ಆ ದಿನಗಳಲ್ಲಿ ವಾಯುಸ ಪಕ್ಷಿ ನಿದ್ರೆ, ಮರಣ ಸ್ಥಿತಿಯಲ್ಲಿದ್ದರೆ ಯಾವ ಕಾರ್ಯವೂ ಸಹ ಯಾವ ಮಹನೀಯರಿಗೂ ಸಫಲವಾಗುವುದಿಲ್ಲವೆಂಬುದನ್ನು ತಿಳಿದುಕೊಳ್ಳಬೇಕು.

ಪ್ರಶ್ನೆಗೆ ಅನುಗುಣವಾಗಿ ಶುಕ್ಲ-ಕೃಷ್ಣ ಪಕ್ಷಗಳ ಅಂಗಪಕ್ಷಿ ಕ್ರಮ

ಅಕಾರ ಶಬ್ದವು ನಾಮದ (ಹೆಸರಿನ) ಮೊದಲಲ್ಲಿದ್ದ ವರಿಗೆ
ಕೈಗಳು – ವಾಯುಸವಾಗಿರುತ್ತದೆ.
ಉದಾಹರಣೆ – ರಾಜು (ಅಕಾರ)

ಇಕಾರ ಶಬ್ದವು ಹೆಸರಿನ ಮೊದಲಲ್ಲಿದ್ದ ವರಿಗೆ
ಶಿರಸ್ಸು (ತಲೆ) – ವಾಯುಸವಾಗಿರುತ್ತದೆ.
ಉದಾಹರಣೆ – ಜೀವನ್ (ಇಕಾರ)

ಉಕಾರ ಶಬ್ದವು ಹೆಸರಿನ ಮೊದಲಲ್ಲಿದ್ದ ವರಿಗೆ
ಕಾಲು – ವಾಯುಸವಾಗಿರುತ್ತದೆ.
ಉದಾಹರಣೆ – ಪುಷ್ಯಪತಿ (ಉಕಾರ)

ಎಕಾರ ಶಬ್ದವು ಹೆಸರಿನ ಮೊದಲಲ್ಲಿದ್ದ ವರಿಗೆ
ದೇಹದ ಎರಡು ಕಡೆ (ಎದೆ ಬೆನ್ನು) – ವಾಯುಸವಾಗಿರುತ್ತದೆ.
ಉದಾಹರಣೆ – ಚೆನ್ನಯ್ಯ (ಎಕಾರ)

ಒಕಾರ ಶಬ್ದವು ಹೆಸರಿನ ಮೊದಲಲ್ಲಿದ್ದವರಿಗೆ
ದೇಹವು – ವಾಯಸವಾಗಿರುತ್ತದೆ.
ಉದಾಹರಣೆ – ಮೋಹನ (ಒಕಾರ)

ಪ್ರಶ್ನೆಗಳಿಗೆ ಉತ್ತರ ಕೊಡುವವರು ತಿಳಿಯಬೇಕಾದ ಮುಖ್ಯ ವಿಷಯಗಳು :

ಪ್ರಶ್ನೆ ಕೇಳುವವರಿಗೆ ಉತ್ತರ ಹೇಳುವವರು ಪ್ರಶ್ನೆ ಕೇಳಿದವರ ಪಕ್ಷಿ ಯಾವ ವಾರದಲ್ಲಿ, ಯಾವ ಕಾಲದಲ್ಲಿ, ಯಾವ ದಿಕ್ಕಿನಲ್ಲಿ, ಯಾವ ಸ್ಥಿತಿಯಲ್ಲಿ ರುವುದೆಂಬುದನ್ನು ತಿಳಿದುಕೊಂಡು ಹಾಗೂ ಯಾರ ವಿಷಯದಲ್ಲಿ ಕೇಳುವರೋ ಅಂಥವರ ಪಕ್ಷಿಯನ್ನೂ ಸಹ ತಿಳಿದುಕೊಂಡು ಆ ಸಮಯದಲ್ಲಿರುವ ಫಲವನ್ನು ಹೇಳಬೇಕು.

ವಾಯಸ ಪಕ್ಷಿ ಸ್ಥಿತಿ ಆರು ಘಳಿಗೆಗಳಾಗಿದ್ದರೂ ಸಹ ಪ್ರತಿ ಸ್ಥಿತಿ ಯಲ್ಲಿಯೂ ಅದು ಅಂತರವಾಗಿ ಸಂಚಾರ ಮಾಡುತ್ತದೆ.

**ಶುಕ್ಲ ಪಕ್ಷ ಹಗಲು – ರಾತ್ರಿ ವಾಯಸ ಪಕ್ಷಿ ಸ್ಥಿತಿ ಅಂತರ್ಭಾಗ ಕಾಲ ಘಳಿಗೆ ವಿವರಣೆ**

ಶುಕ್ಲ ಪಕ್ಷ ಹಗಲಿನಲ್ಲಿ

ಭೋಜನ ಕಾಲ – ೧॥ ($1\frac{1}{2}$) ಘಳಿಗೆ
ಗಮನ ಕಾಲ – ೧॥ ($1\frac{1}{2}$) ಘಳಿಗೆ
ರಾಜ್ಯ ಕಾಲ – ೨ (2) ಘಳಿಗೆ
ನಿದ್ರಾ ಕಾಲ – ।।। ($\frac{3}{4}$) ಘಳಿಗೆ
ಮರಣ ಕಾಲ – । ($\frac{1}{4}$) ಘಳಿಗೆ
ಅಂತು – ೬ (6) ಘಳಿಗೆ

ಶುಕ್ಲ ಪಕ್ಷ ರಾತ್ರಿಯಲ್ಲಿ

ಭೋಜನ ಕಾಲ – ೧। ($1\frac{1}{4}$) ಘಳಿಗೆ
ಗಮನ ಕಾಲ – ೧। ($1\frac{1}{4}$) ಘಳಿಗೆ
ರಾಜ್ಯ ಕಾಲ – ೧ (1) ಘಳಿಗೆ

ನಿದ್ರಾ ಕಾಲ – ೧ (1) ಘಳಿಗೆ
ಮರಣ ಕಾಲ – ೧।। ($1\frac{1}{2}$) ಘಳಿಗೆ
ಅಂತು – ೬ (6) ಘಳಿಗೆ

## ಕೃಷ್ಣ ಪಕ್ಷ ಹಗಲು – ರಾತ್ರಿ ವಾಯುಸ ಪಕ್ಷಿ ಸ್ಥಿತಿ ಅಂತರ್ಭಾಗ ಕಾಲು ಘಳಿಗೆ ವಿವರಣೆ

### ಕೃಷ್ಣ ಪಕ್ಷ ಹಗಲಿನಲ್ಲಿ

ಭೋಜನ ಕಾಲ – ೨ (2) ಘಳಿಗೆ
ಗಮನ ಕಾಲ – ೧।। ($1\frac{1}{2}$) ಘಳಿಗೆ
ರಾಜ್ಯ ಕಾಲ – ।।। ($\frac{3}{4}$) ಘಳಿಗೆ
ನಿದ್ರಾ ಕಾಲ – ।। ($\frac{1}{2}$) ಘಳಿಗೆ
ಮರಣ ಕಾಲ – ೧। ($1\frac{1}{4}$) ಘಳಿಗೆ
ಅಂತು – ೬ (6) ಘಳಿಗೆ

### ಕೃಷ್ಣ ಪಕ್ಷ ರಾತ್ರಿಯಲ್ಲಿ

ಭೋಜನ ಕಾಲ – ೧।।। ($1\frac{3}{4}$) ಘಳಿಗೆ
ಗಮನ ಕಾಲ – ೧।। ($1\frac{1}{2}$) ಘಳಿಗೆ
ರಾಜ್ಯ ಕಾಲ – ।।। ($\frac{3}{4}$) ಘಳಿಗೆ
ನಿದ್ರಾ ಕಾಲ – ।।। ($\frac{3}{4}$) ಘಳಿಗೆ
ಮರಣ ಕಾಲ – ೧। ($1\frac{1}{4}$) ಘಳಿಗೆ
ಅಂತು – ೬ (6) ಘಳಿಗೆ

ಶುಕ್ಲ ಪಕ್ಷ ಭಾನುವಾರ, ಮಂಗಳವಾರಗಳಲ್ಲಿ ವಾಯುಸ ಪಕ್ಷಿ ಒಂದೇ ರೀತಿಯಲ್ಲಿ ಸಂಚಾರ ಮಾಡುವುದರಿಂದ ಕೆಲವು ಚಕ್ರಗಳನ್ನು ಎರಡು ವಾರಕ್ಕೂ ಒಟ್ಟಾಗಿಯೇ ಬರೆಯಲಾಗಿದೆ.

ಭಾನುವಾರ, ಮಂಗಳವಾರಗಳಲ್ಲಿ ಮೊದಲನೇ ಜಾವ ಆರು ಘಳಿಗೆಯೊಳಗೆ

ವಾಯುಸಕ್ಕೆ – ೨ (2) ಘಳಿಗೆ ರಾಜ್ಯ ಕಾಲ

ಎರಡನೇ ಜಾವ ಆರು ಘಳಿಗೆಯೊಳಗೆ

ವಾಯುಸಕ್ಕೆ – ||| ($\frac{3}{4}$) ಘಳಿಗೆ ನಿದ್ರಾ ಕಾಲ

ಇದೇ ರೀತಿ ಉಳಿದವೆಲ್ಲವನ್ನೂ ಆ ವಾರ ಚಕ್ರಗಳನ್ನು ನೋಡಿ ಸುಲಭ ವಾಗಿ ತಿಳಿದುಕೊಳ್ಳಬಹುದು.

ಅಂತರ್ಭಾಗ ರೀತಿ ಶುಕ್ಲ – ಕೃಷ್ಣ ಪಕ್ಷ ಅಕ್ಷರಗಳು

ಶುಕ್ಲ ಪಕ್ಷದಲ್ಲಿ—ಉಕಾರ – ವಾಯುಸ

ಕೃಷ್ಣ ಪಕ್ಷದಲ್ಲಿ—ಒಕಾರ – ವಾಯುಸ

ಇದೇ ರೀತಿ ಅಂತರ್ಭಾಗ ಪಕ್ಷಿ ಶಾಸ್ತ್ರದ ಕರ್ತರಾದ ರೋಮಶ ಮಹರ್ಷಿ ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಹಲವರು ಶುಕ್ಲ ಪಕ್ಷ ಅಕ್ಷರಗಳನ್ನೇ ಕೃಷ್ಣ ಪಕ್ಷಕ್ಕೂ ಉಪಯೋಗಿಸುತ್ತಾರೆ. ಹಾಗಿದ್ದರೂ ಸಹ ಅಂತರ್ಭಾಗಕ್ಕೆ ಮಾತ್ರ ಎರಡು ಪಕ್ಷಗಳಿಗೂ ಬೇರೆ ಬೇರೆ ಅಕ್ಷರಗಳನ್ನು ಉಪಯೋಗಿಸಬಹುದು.

# ಕುಕ್ಕುಟ (ಕೋಳಿ) ಪ್ರಶ್ನ ಶಾಸ್ತ್ರ

**ಕೋಳಿಗೆ ವಾಕ್ಯ ಪ್ರಥಮಾಕ್ಷರಗಳು :**

ಎ, ಕೆ, ಜೆ, ಟೆ, ತೆ, ಪೆ, ಮೆ, ಯೆ, ರೆ, ವೆ, ಏ, ಕೇ, ಜೇ, ಟೇ, ತೇ, ಪೇ, ಮೇ, ಯೇ, ರೇ, ವೇ. ಇದೇ ರೀತಿ ಐಕಾರವೂ ಸಲ್ಲುತ್ತದೆ.

**ಕೋಳಿಗೆ ಶುಕ್ಲ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು :**

ಅನುರಾಧ, ಜ್ಯೇಷ್ಠ ಮೂಲ, ಪೂರ್ವಾಷಾಢ, ಉತ್ತರಾಷಾಢ.

**ಕೋಳಿಗೆ ಕೃಷ್ಣ ಪಕ್ಷದಲ್ಲಿ ಸಲ್ಲುವ ನಕ್ಷತ್ರಗಳು ;**

ಅಶ್ವಿನಿ, ಭರಣಿ, ಕೃತ್ತಿಕಾ, ರೋಹಿಣಿ, ಮೃಗಶಿರಾ.

**ಶುಕ್ಲ ಪಕ್ಷ ತಿಥಿ :**

ಶುದ್ಧ ಚೌತಿ, ಶುದ್ಧ ನವಮಿ, ಶುದ್ಧ ಚತುರ್ದಶಿ.

**ಶುಕ್ಲ ಪಕ್ಷ ರಾಶಿ :**

ವೃಷಭ, ತುಲಾ.

**ಕೃಷ್ಣ ಪಕ್ಷ ತಿಥಿ :**

ಬಹುಳ ಬಿದಿಗೆ, ಬಹುಳ ಸಪ್ತಮಿ, ಬಹುಳ ದ್ವಾದಶಿ.

**ಕೃಷ್ಣ ಪಕ್ಷ ರಾಶಿ :**

ಮೇಷ, ವೃಶ್ಚಿಕ.

ಆರೂಢಕ್ಕೆ ಉಪಯೋಗವಾದ ಶುಕ್ಲ ಪಕ್ಷ ಕುಕ್ಕುಟ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಎಲೆ ಹಸಿರು | ಶೂದ್ರ | ಅಪ್ಪು (ವರುಣ) | ಉತ್ತರ | ಗಿಡಗ, ಗೂಬೆ, | ಕಾಗೆ, ನವಿಲು |

ಆರೂಢಕ್ಕೆ ಉಪಯೋಗವಾದ ಕೃಷ್ಣ ಪಕ್ಷ ಕುಕ್ಕುಟ ಪಕ್ಷಿ ಚಕ್ರ

| ಬಣ್ಣ | ಕುಲ | ಭೂತ | ದಿಕ್ಕು | ಶತ್ರು | ಮಿತ್ರ |
|---|---|---|---|---|---|
| ಬಿಳುಪು | ಶೂದ್ರ | ವಾಯು | ಮಧ್ಯೆ | ಕಾಗೆ, ಗಿಡಗ | ನವಿಲು, ಗೂಬೆ |

ಆರೂಢಕ್ಕೆ ಉಪಯೋಗವಾದ ಶುಕ್ಲ-ಕೃಷ್ಣ ಪಕ್ಷಗಳ ಕುಕ್ಕುಟ ಪಕ್ಷಿ ಚಕ್ರ

| ಅಕ್ಷರಗಳು | ಜಾತಿ | ಗ್ರಹ | ದೇವತೆ | ಆಕಾರ | ಧಾತುಮೂಲ ಜೀವ |
|---|---|---|---|---|---|
| ಎ | ಸ್ತ್ರೀ | ಚಂದ್ರ | ಈಶ್ವರ | ಚತುಷ್ ಕೋನ | ಧಾತು ಮೂಲ |

| ಪಾದ | ರುಚಿ | ವೃಕ್ಷ | ಲೋಹ | ಕಾಲ | ಗಮನಾಗಮನ |
|---|---|---|---|---|---|
| ಏಕ ಪಾದ | ಹುಳಿ | ಕೋಲಮಲ್ಲಿಗೆ | ಕಂಚು | ವರ್ತಮಾನ ಕಾಲ | ಊರೊಳಗೆ ಬಂದನು |

## ಕುಕ್ಕುಟ ಪಕ್ಷಿಯು ಆಹಾರ ಚಕ್ರ




### ಕಾಲ ರೀತಿ ನಿರ್ದೇಶನ :

ಒಂದು ದಿನವನ್ನು 5 ಭಾಗಗಳಾಗಿ ವಿಭಜನೆ ಮಾಡಿದರೆ ಒಂದು ಭಾಗಕ್ಕೆ 6 ಘಳಿಗೆ ದೊರಕುತ್ತದೆ. ಶುಕ್ಲ ಪಕ್ಷಗಳೊಂದೊಂದಕ್ಕೂ 15 ತಿಥಿಗಳು.

7 ದಿವಸಗಳಿಗೆ 1 ವಾರ

1 ದಿವಸಕ್ಕೆ—30 ಹಗಲು ಘಳಿಗೆಗಳು, 30 ರಾತ್ರಿ ಘಳಿಗೆಗಳು

6 ಘಳಿಗೆ—1 ಝಾವ

ಕುಕ್ಕುಟ ಪಕ್ಷಿ ಸ್ಥಿತಿ ಶುಕ್ಲ ಪಕ್ಷದ ಹಗಲಿನಲ್ಲಿ:—

ಹಂಸುಕೇಶೋ—ಅಂದರೆ ಶುಕ್ರವಾರದಲ್ಲಿ ಸಂಚಾರ ಮಾಡುವುದು.

ಕುಕ್ಕುಟ ಪಕ್ಷಿ ಸ್ಥಿತಿ ಶುಕ್ಲ ಪಕ್ಷದ ರಾತ್ರಿಯಲ್ಲಿ :—

ಉಪೇಂದ್ರೋಽಹರಿಃ – ಅಂದರೆ ಸೋಮವಾರ, ಬುಧವಾರಗಳಲ್ಲಿ ಸಂಚಾರ ಮಾಡುವುದು.

ಕುಕ್ಕುಟ ಪಕ್ಷಿ ಸ್ಥಿತಿ – ಕೃಷ್ಣ ಪಕ್ಷದ ಹಗಲಿನಲ್ಲಿ :

ದೇವೋಽರುಚಿರಃ – ಅಂದರೆ ಭಾನುವಾರ, ಮಂಗಳವಾರಗಳಲ್ಲಿ ಸಂಚಾರ ಮಾಡುವುದು.

ಕುಕ್ಕುಟ ಪಕ್ಷಿ ಸ್ಥಿತಿ – ಕೃಷ್ಣ ಪಕ್ಷದ ರಾತ್ರಿಯಲ್ಲಿ :

ಜನೇಽಬಿ ಗುಣೋಃ – ಅಂದರೆ ಸೋಮವಾರ, ಶನಿವಾರಗಳಲ್ಲಿ ಸಂಚಾರ ಮಾಡುವುದು.

**ಶುಕ್ಲ ಪಕ್ಷದಲ್ಲಿ ಕುಕ್ಕುಟ ಪಕ್ಷಿಯು ಸಂಚಾರ ಕ್ರಮದ ಶ್ಲೋಕ :**

॥ ಭೃಗವಾರಂಚ ಕುಕ್ಕುಟಃ ಶುಕ್ಲ ಪಕ್ಷಂಚ ಚಕ್ರಯೋಃ ॥

**ಕೃಷ್ಣ ಪಕ್ಷದಲ್ಲಿ ಕುಕ್ಕುಟ ಪಕ್ಷಿಯು ಸಂಚಾರ ಕ್ರಮದ ಶ್ಲೋಕ :**

॥ ಭಾನುಭೌಮ್ಯಶ್ಚ ಕುಕ್ಕುಟ: ಕೃಷ್ಣ ಪಕ್ಷಂಚ ಚಕ್ರಯೋಃ ॥

**ಶುಕ್ಲ ಪಕ್ಷದಲ್ಲಿ ಕುಕ್ಕುಟ ಪಕ್ಷಿಯು ಪಂಚಾವಸ್ಥೆಯ ಫಲಗಳು**

ಮೊದಲನೇ ಜಾವದಲ್ಲಿ – ಭೋಜನ ಫಲ

ಎಲ್ಲಾ ರೀತಿಯಲ್ಲಿ ಶುಭವೇ ಆಗುವುದು. ಜಗಳ ಕಾದು ಮನೆ ಬಿಟ್ಟು ಹೋದವರು ವಾಪಸ್ಸಾಗುವರು. ಮನಸ್ಸಿಗೆ ಕ್ಲೇಶವಿರುವುದಿಲ್ಲ. ಸರ್ವ ರೀತಿ ಯಲ್ಲಿ ಕ್ಷೇಮವೇ ಇರುವುದು. ಧಾರಾಳವಾಗಿ ಮಳೆ ಸುರಿಯುವುದು. ಬೆಳೆ ಸಮೃದ್ಧಿಯಾಗಿ ಆಗುವುದು. ಖಾಯಿಲೆ ಗುಣವಾಗುವುದು. ಮನ ಮೆಚ್ಚಿದ ಮಡದಿ ದೊರಕುವಳು. ಪ್ರಯಾಸವಿಲ್ಲದೆ ಹೆರಿಗೆ ಆಗುವುದು. ಸರ್ವ ಕಾರ್ಯ ಗಳಲ್ಲೂ ಜಯವೇ ಆಗುವುದು. ವ್ಯಾಪಾರದಲ್ಲಿ ಬಹಳವಾಗಿ ಲಾಭ ದೊರೆಯು ವುದು. ಮನೆಯಲ್ಲಿ ಸುಖ-ಶಾಂತಿ ನೆಲೆಸಿರುವುದು.

ಎರಡನೇ ಜಾವದಲ್ಲಿ – ಗಮನಫಲ

ಈ ಕಾಲದಲ್ಲಿ ದೂರ ಪ್ರಯಾಣ ಕೈಗೊಳ್ಳಬಾರದು. ಮಳೆ ಬಿದ್ದರೂ ಸಹ ಬೆಳೆ ಸರಿಯಾಗಿ ಆಗುವುದಿಲ್ಲ. ಸ್ತ್ರೀಯರ ವಿಷಯವಾಗಿ ಎಷ್ಟೇ ಪ್ರಯತ್ನ

ಹಟ್ಟಿದರೂ ಸಫಲತೆ ದೊರಕುವುದಿಲ್ಲ. ವ್ಯಾಪಾರದಲ್ಲಿ ಧನಲಾಭ ಉಂಟಾ
ವುದಿಲ್ಲ. ಎಲ್ಲಾ ಕೆಲಸಗಳೂ ಅರ್ಧಂಬರ್ಧ ಆಗುವುದು. ಮನಸ್ಸಿಗೆ ನೆಮ್ಮ
ಯಿರುವುದಿಲ್ಲ.

ಮೂರನೇ ಜಾವದಲ್ಲಿ – ರಾಜ್ಯಫಲ

ಮೇಲಧಿಕಾರಿಗಳಿಂದ ಲಾಭ ದೊರೆಯುವುದು. ಬಡತನ ದೂರವಾ
ಶ್ರೀಮಂತಿಕೆ ಬರುವುದು. ಎಲ್ಲಾ ಕೆಲಸಗಳೂ ಸಫಲವಾಗುವವು. ಖಾಯಿ
ಗುಣವಾಗುವುದು. ಶತ್ರುಗಳ ಭಯವಿರುವುದಿಲ್ಲ. ಕಳೆದುಕೊಂಡ ಅ
ಪುನಃ ದೊರಕುವುದು. ವ್ಯಾಪಾರದಲ್ಲಿ ಹೆಚ್ಚು ಲಾಭ ದೊರೆಯುವುದ
ಎಲ್ಲಾ ಕೆಲಸಗಳೂ ಶುಭವಾಗಿಯೇ ನಡೆಯುವವು. ಮನದಲ್ಲಿ ಚಿಂತೆಯಿ
ವುದಿಲ್ಲ.

ನಾಲ್ಕನೇ ಜಾವದಲ್ಲಿ – ನಿದ್ರೆಯ ಫಲ

ಖಾಯಿಲೆ ಗುಣವಾಗುವುದಿಲ್ಲ. ಮನೆ ಬಿಟ್ಟು ಹೋದವರು ವಾಪಸ
ಗುವುದಿಲ್ಲ. ಒಳ್ಳೆಯ ಫಲ ದೊರೆಯುವುದಿಲ್ಲ. ವ್ಯಾಪಾರದಲ್ಲಿ ಲಾಭ ದೊ
ಯುವುದಿಲ್ಲ. ಎಲ್ಲಾ ಕಾರ್ಯಗಳಲ್ಲಿಯೂ ನಷ್ಟವೇ ಉಂಟಾಗುತ್ತ
ಕೇಡಾಗುತ್ತದೆ. ಮಳೆ ಇಲ್ಲದೆ ಬೆಳೆ ಒಣಗಿ ಹೋಗುವುದು. ಯಾವಾಗ
ಮನಸ್ಸಿನಲ್ಲಿ ಚಿಂತೆ ಕಾಡುವುದು. ಬಂಧು-ಮಿತ್ರರಲ್ಲಿ ಕಲಹ ಉಂಟಾಗುವುದ
ಮಕ್ಕಳು ದಾರಿ ತಪ್ಪುವರು. ಮಡದಿಯೊಡನೆ ಸದಾ ಕಿರಿಕಿರಿ ಇರುತ್ತದೆ.

ಐದನೇ ಜಾವದಲ್ಲಿ – ಮರಣ ಫಲ

ಮರಣ ವಾರ್ತೆಯನ್ನು ಕೇಳಬೇಕಾಗುತ್ತದೆ. ಖಾಯಿಲೆ ಎಂತಹು
ಔಷಧಿಯಿಂದಲೂ ಗುಣವಾಗುವುದಿಲ್ಲ. ಕೈ ಹಾಕಿದ ಕಾರ್ಯಗಳು ನ
ವಾಗಿ ಹೋಗುವವು. ವಸ್ತುಗಳನ್ನು ಕಳೆದುಕೊಳ್ಳಬೇಕಾಗುವುದು. ಅ
ಕೈಬಿಟ್ಟು ಹೋಗುವುದು. ಮಿತ್ರರು ಶತ್ರುಗಳಾಗುವರು. ಆಹಾರ ಪದಾ
ಗಳಿಗೆ ಪರದಾಡಬೇಕಾಗುವುದು. ಮಳೆ ಸಕಾಲಕ್ಕೆ ಬೀಳದೆ ಸಸಿಗಳು ಒಣ
ಹೋಗುವವು. ಮಕ್ಕಳೇ ದೂಷಿಸುವರು. ಎಲ್ಲಾ ರೀತಿಯ ವ್ಯಾಪಾರದ
ನಷ್ಟವೇ ಉಂಟಾಗುವುದು.

## ಕೃಷ್ಣ ಪಕ್ಷ ಕುಕ್ಕುಟ ಪಕ್ಷಿಯ ಪಂಚಾವಸ್ಥೆಯ ಫಲಗಳು

### ಮೊದಲನೇ ಜಾವದಲ್ಲಿ – ಭೋಜನ ಫಲ

ಯಾವುದೇ ರೀತಿಯ ಕಲಹ ಉಂಟಾಗುವುದಿಲ್ಲ. ರೋಗ ವಾಸಿಯಾಗುವುದು. ಸಕಾಲಕ್ಕೆ ಧಾರಾಳವಾಗಿ ಮಳೆ ಸುರಿಯುವುದು. ಬೇರೆ ಕಡೆಗೆ ಪ್ರಯಾಣ ಮಾಡಬೇಕಾದ ಪ್ರಸಂಗ ಬರುವುದಿಲ್ಲ. ಬೆಳೆ ಚೆನ್ನಾಗಿ ಆದರೂ ಬೆಲೆ ಹೆಚ್ಚಾಗುವುದು. ವ್ಯಾಪಾರದಲ್ಲಿ ಹೆಚ್ಚು ಲಾಭ ದೊರೆಯುವುದು. ಮನಸ್ಸಿಗೆ ನೆಮ್ಮದಿ ಇರುವುದು. ಧನ ಲಾಭ ಉಂಟಾಗುವುದು. ಅತಿಥಿಗಳು ತೃಪ್ತಿಯಿಂದ ಹರಸುವರು.

### ಎರಡನೇ ಜಾವದಲ್ಲಿ – ಗಮನ ಫಲ

ಎಲ್ಲಾ ರೀತಿಯ ಸ್ಪರ್ಧೆಯಲ್ಲಿ ಗೆಲುವು ದೊರೆಯುವುದು. ಹಳೆಯ ರೋಗಗಳು ಸಹ ಗುಣವಾಗುವವು. ಮನಸ್ಸಿಗೆ ಯಾವುದೇ ರೀತಿಯ ಭಯ ವಿರುವುದಿಲ್ಲ. ಶುಭಫಲವು ಉಂಟಾಗುವುದು. ಚೆನ್ನಾಗಿ ಮಳೆ ಸುರಿಯುವುದು. ವಿದೇಶಕ್ಕೆ ಹೋದವರು, ಜಗಳ ಕಾದು ಮನೆಬಿಟ್ಟು ಹೋದವರು ಹಿಂತಿರುಗಿ ಬರುವರು. ವ್ಯಾಪಾರದಲ್ಲಿ ಅಧಿಕ ಲಾಭ ದೊರೆಯುವುದು. ಮನೆಯಲ್ಲಿ ಸುಖ-ಶಾಂತಿಗಳು ನೆಲೆಸಿರುವುದು.

### ಮೂರನೇ ಜಾವದಲ್ಲಿ – ರಾಜ್ಯಫಲ

ಕೈ ಹಿಡಿದ ಕಾರ್ಯಗಳು ಸುಸೂತ್ರವಾಗಿ ನೆರವೇರುವವು. ಬೇರೆ ಸ್ಥಳಗಳಿಗೆ ಪ್ರಯಾಣ ಮಾಡುವುದರಿಂದ ಧನ ಲಾಭವಾಗುವುದು. ಮಳೆ ಯಥೇಚ್ಛವಾಗಿ ಸುರಿಯುವುದಿಲ್ಲ. ಆದರೆ ಬೆಳೆಗೆ ಯಾವುದೇ ರೀತಿಯ ಹಾನಿ ಉಂಟಾಗುವುದಿಲ್ಲ. ಶತ್ರುಗಳ ಭಯವಿರುವುದಿಲ್ಲ. ಸ್ಪರ್ಧೆಯಲ್ಲಿ ಜಯವಾಗುವುದು. ಎಲ್ಲಾ ರೀತಿಯ ವ್ಯಾಪಾರದಲ್ಲಿ ಧನಲಾಭ ಹೆಚ್ಚಾಗಿ ಆಗುವುದು. ಎಲ್ಲಾ ರೀತಿಯಲ್ಲಿ ಶುಭವೇ ಆಗುವುದು. ಮನೆಯಲ್ಲಿ, ಮನದಲ್ಲಿ ನೆಮ್ಮದಿ ಇರುವುದು.

